KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಜನವರಿ ೧೪, ೨೦೧೦ (ಪುಷ್ಯ ೨೪, ಶಕ ವರ್ಷ ೧೯೩೧) | ಸಂಚಿಕೆ ೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 596 ಸಅಸೇ 2009, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2009.**

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಹುದ್ದೆಯನ್ನು ಸೃಜಿಸುವ ಬಗ್ಗೆ.

ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಒಂದು ಹುದ್ದೆಯನ್ನು IAS HAG ಶ್ರೇಣಿ Rs. 67000-(Annual Increment 3%)-79000ರಲ್ಲಿ ದಿನಾಂಕ 6–11–2009ರಿಂದ ಅನ್ವಯವಾಗುವಂತೆ ಹಾಗೂ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಈ ಮೂಲಕ ಸೃಜಿಸಲಾಗಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯೊಡನೆ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 2177 : ಸೇವೆಗಳು–3:2009, ದಿನಾಂಕ 3–12–2009ರಲ್ಲಿ ಸಮಾಲೋಚಿಸಿದ ನಂತರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್. 2801

### EDUCATION SECRETARIAT

**Sub:** Issue of terms and conditions of appointment of Prof. D. Shivalingaiah, Registrar, Tumkur University, Tumkur.

**Read:** 1) Government Notification No. ED 124 UNE 2009 dated: 16.11.09.
2) Letter No. MU/13/EST (2)/2009-10, dated 27.11.2009 from the registrar, Mangalore University, Mangalore.
3) Letter No. TU/PSVC/412(1)/2009-10, dt:1-12-2009.

**Preamble:**

Prof. D.Shivalingaiah, Professor, Dept. of Library and Information Science, Mangalore University, Mangalore, has been appointed as the Registrar of Tumkur University, Tumkur, vide Govt. Notification dt:16-11-2009 read (1) above. The Officer has reported for duty on 18-11-2009 at Tumkur University, Tumkur. The Registrar, Mangalore University, Mangalore, has reported that the Syndicate, which met on 20.11.2009, has resolved to issue terms and conditions vide letter dt:27-11-2009 read (2) above. The

Vice-Chancellor, Tumkur University, has requested to spare the services of Prof. D. Shivalingaiah as Registrar of Tumkur University for a period of three years vide his letter dt:1-12-2009 read (3) above. It is necessary to issue terms and conditions of his appointment. The matter has been examined. Hence the following orders.

**Government Order No. ED 100 UDV 2009, Bangalore, Dated: 2nd December 2009**

Government are pleased to issue the terms and conditions of appointment of Prof. D.Shivalingaiah, Professor, Dept. of Library and Information Science, Mangalore University, Mangalore as the Registrar, Tumkur University, Tumkur which are as appended to this order.

By Order and in the Name of the Governor of Karnataka

**U.B. ULAVI**

Under Secretary to Government,

Education Department (Universities)

**APPENDIX TO G.O.NO. ED 100 UDV 2009, DATED 2-12-2009**

TERMS AND CONDITIONS OF DEPUTATION OF Prof. D. SHIVALINGAIAH, PROFESSOR, DEPT. OF LIBRARY & INFORMATION SCIENCE, MANGALORE UNIVERSITY, MANGALORE, AS THE REGISTRAR, TUMKUR UNIVERSITY, TUMKUR.

**1. PERIOD :** The period of service of Prof. D. Shivalingaiah, Professor, Dept. of Library and Information Science, Mangalore University, Mangalore is for the period of Three years or until further orders whichever is earlier.

**2. COMMENCEMENT AND END OF APPOINTMENT :** The Appointment shall commence with effect from 18.11.2009, and ends on the date he relinquishes his office.

**3. PAY AND OTHER ALLOWANCES :** During the period of appointment, Prof. D.Shivalingaiah, Professor, Dept. of Library and Information Science, Mangalore University, Mangalore shall be entitled to draw own pay and grade admissible to him is his parent organization. Other allowances, such as DA/HRA/CCA as admissible under rules at the deputed place. He shall not be entitled to any other deputation or foreign service allowance.

**4. LEAVE RULES :** He shall be treated as vacation prevented staff governed by the leave rules as applicable to him.

**5. LEAVE SALARY CONTRIBUTION :** The Tumkur University, Tumkur, Shall pay Leave Salary Contribution at the rate of 11% of pay.

**6. PENSION CONTRIBUTION :** Pension contribution shall be paid by the Tumkur University, Tumkur at the provisional rate at 12.5% on the total basic pay received during the period of deputation as per statute.

**7. MEDICAL CONCESSION :** The official shall be entitled to the medical attendance as per the Karnataka Government Servants (Medical Attendance) Rules, 1963.

**8. JOINING TIME :** He shall be entitled for joining time pay and transfer TA as per rules.

9. He shall perform the functions of the Registrar and attend to all work entrusted to him from time to time by the Vice-Chancellor, Tumkur University, Tumkur.

10. He shall perform his duties diligently and he shall maintain strict secrecy in respect of official information, which he comes to know in the course of his duties.

11. He shall be liable to reimburse to Government all the losses, which the Government may sustain due to misconduct of any sort on his part.

**U.B. ULAVI**

P.R. 2802

Under Secretary to Government

Education Department (Universities)

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಇಡಿ 367 ಎಂಸಿಡಿ 2009, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2009**

**ವಿಷಯ:** ಶ್ರೀ ಸಹ್ಯಾದ್ರಿ ವಿದ್ಯಾಸಂಸ್ಥೆ, ಚಿಗಟೇರಿ, ಹರಪನ ಹಳ್ಳಿ ಸಂಸ್ಥೆಯ ಸಮನ್ವಯ ಶಿಕ್ಷಣ ಯೋಜನೆ 2007–08ನೇ ಸಾಲಿನ ಅನುದಾನವನ್ನು ದಾವಣಗೆರೆ ಜಿಲ್ಲೆಯ ಬದಲಿಗೆ ಬಳ್ಳಾರಿ ಜಿಲ್ಲೆಗೆ ಬಿಡುಗಡೆ ಮಾಡುವಂತೆ ಕೋರಿರುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಇಡಿ 196 ಯೋಸಕ 2009 ದಿನಾಂಕ:30–05–2008.
2) ಸರ್ಕಾರಿ ಆದೇಶ ಸಂಖ್ಯೆ: ಇಡಿ 138 ಎಂಸಿಡಿ 2009 ದಿನಾಂಕ:23–09–2009.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಸರ್ಕಾರಿ ಆದೇಶಗಳ ಅನುಬಂಧದಲ್ಲಿ ಈ ಕೆಳಕಂಡಂತೆ ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು:–

| ಕ್ರಮ ಸಂಖ್ಯೆ | ಹಿಂದಿನ ಆದೇಶದಲ್ಲಿದ್ದ ವಿಳಾಸ | ಪ್ರಸ್ತುತ ಬದಲಾವಣೆ ಮಾಡಬೇಕಾದ ತಾಲ್ಲೂಕು ಹಾಗೂ ಜಿಲ್ಲೆ |
|---|---|---|
| 1 | ಶ್ರೀ ಸಹ್ಯಾದ್ರಿ ಎಜುಕೇಷನ್ ಸೊಸೈಟಿ, ಚಿಗಟೇರಿ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ | ಶ್ರೀ ಸಹ್ಯಾದ್ರಿ ಎಜುಕೇಷನ್ ಸೊಸೈಟಿ, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ |

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್.ಮಾಗಿ**

ಪಿ.ಆರ್. 2803

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ).

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ:** ಆರ್.ಐ.ಡಿ.ಎಫ್–13 ಯೋಜನೆಯಡಿ ಮತ್ತು 4202 ಅಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ : ಇಡಿ 248 ಯೋಸಕಾ: 2008 ಬೆಂಗಳೂರು ದಿನಾಂಕ 30–12–2008 (ಸ್ವೀಮರ 198)
2) ಸರ್ಕಾರದ ಆದೇಶ ಸಂಖ್ಯೆ : ಇಡಿ 172 ಯೋಸಕಾ: 2008, ಬೆಂಗಳೂರು ದಿನಾಂಕ 30–12–2008 (ಸ್ವೀಮರ 199)
3) ಸರ್ಕಾರದ ಆದೇಶ ಸಂಖ್ಯೆ : ಇಡಿ 172 ಯೋಸಕಾ: 2008, ಬೆಂಗಳೂರು ದಿನಾಂಕ 09–01–2009 (ಸ್ವೀಮರ 137)
4) ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ ಕಾಶಿಇ 19 ಯೋಜನೆ 2008–09 ದಿನಾಂಕ 31–10–2009.

**ಪ್ರಸ್ತಾವನೆ:**

ಮೇಲೆ (1)(2) ಮತ್ತು (3)ರ ಸರ್ಕಾರದ ಆದೇಶದಲ್ಲಿ ಆರ್.ಐ.ಡಿ.ಎಫ್–13 ಅಡಿ ಹಾಗೂ 4202 ಅಡಿ 2008–09ನೇ ಸಾಲಿಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣ ಮಾಡಲು ಅನುದಾನ ಹಂಚಿಕೆ ಮಾಡಿ ಸದರಿ ಕಾಮಗಾರಿಗಳನ್ನು ರೈಟ್ಸ್ ಸಂಸ್ಥೆ, ಬೆಂಗಳೂರು ಇವರಿಗೆ ಕಾರ್ಯಕ್ರಮ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿದೆ.

ಓದಲಾದ (4)ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಈ ಕೆಳಕಾಣಿಸಿದ 15 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ | ಅನುದಾನ ಒದಗಿಸಲಾದ ಮೂಲ |
|---|---|---|---|---|
| 01 | ಮೂಡಿಗೆರೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 10.00 | 05.67 | 4202 |

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ | ಅನುದಾನ ಒದಗಿಸಲಾದ ಮೂಲ |
|---|---|---|---|---|
| 02 | ನರಸಿಂಹರಾಜಪುರ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 30.00 | 17.00 | 4202 |
| 03 | ಕಡೂರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 150.00 | 88.04 | 4202 |
| 04 | ಗಜೇಂದ್ರಗಡ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 50.00 | 35.70 | RIDF-13 |
| 05 | ಹುಲಿಕೋಟಿ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 100.00 | 71.60 | RIDF-13 |
| 06 | ಕುದೂರು, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 25.00 | 17.88 | RIDF-13 |
| 07 | ರಾಮನಗರ(ಮ) ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 75.00 | 43.52 | 4202 |
| 08 | ರಾಮನಗರ (ಕಾ) ಸರ್ಕಾರಿ ಪ್ರಥಮದರ್ಜೆ ಕಟ್ಟಡ ಕಾಮಗಾರಿ | 100.00 | 56.69 | 4202 |
| 09 | ಕಂಪ್ಲಿ ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 25.00 | 17.88 | RIDF-13 |
| 10 | ಹೊಸಪೇಟೆ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 75.00 | 42.52 | 4202 |
| 11 | ಹೂವಿನಹಡಗಲಿ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ | 75.00 | 42.52 | 4202 |
| 12 | ತೆಕ್ಕಲಿಕೋಟೆ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ | 100.00 | 71.45 | RIDF-13 |
| 13 | ಹೆಸರಘಟ್ಟ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ | 25.00 | 17.88 | RIDF-13 |
| 14 | ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ | 75.00 | 42.52 | 4202 |
| 15 | ತ್ಯಾಮಗೊಂಡ್ಲು. ಪ್ರ.ದ. ಕಾಲೇಜು ಕಟ್ಟಡ | 200.00 | 143.20 | RIDF-13 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 455 ಯೋಯೋಕ 2009, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2009**

2008–09ನೇ ಸಾಲಿಗೆ ಆರ್.ಐ.ಡಿ.ಎಫ್.13 ಮತ್ತು 4202 ಅಡಿ ಒದಗಿಸಿರುವ ಅನುದಾನದಲ್ಲಿ ಈ ಕೆಳಕಾಣಿಸಿದ 15 ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ಕಾಮಗಾರಿಗಳಿಗೆ ಅವುಗಳ ಮುಂದೆ ತೋರಿಸಿರುವ ಅಂದಾಜು ಮೊತ್ತಕ್ಕೆ ಕೆಲವು ಷರತ್ತುಗಳನ್ನು ವಿಧಿಸಿ, ಆಡಳಿತಾತ್ಮಕ ಅನುಮೋದನೆ ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ | ಅನುದಾನ ಒದಗಿಸಲಾದ ಮೂಲ |
|---|---|---|---|---|
| 01 | ಮೂಡಿಗೆರೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 10.00 | 05.67 | 4202 |
| 02 | ನರಸಿಂಹರಾಜಪುರ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 30.00 | 17.00 | 4202 |
| 03 | ಕಡೂರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 150.00 | 88.04 | 4202 |
| 04 | ಗಜೇಂದ್ರಗಡ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 50.00 | 35.75 | RIDF-13 |
| 05 | ಹುಲಿಕೋಟೆ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 100.00 | 71.60 | RIDF-13 |
| 06 | ಕುದೂರು, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 25.00 | 17.88 | RIDF-13 |

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ | ಅನುದಾನ ಒದಗಿಸಲಾದ ಮೂಲ |
|---|---|---|---|---|
| 07 | ರಾಮನಗರ(ಮ) ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 75.00 | 43.52 | 4202 |
| 08 | ರಾಮನಗರ (ಕಾ) ಸರ್ಕಾರಿ ಪ್ರಥಮದರ್ಜೆ ಕಾಲೇಜ್ ಕಟ್ಟಡ ನಿರ್ಮಾಣ | 100.00 | 56.69 | 4202 |
| 09 | ಕಂಪ್ಲಿ ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 25.00 | 17.88 | RIDF-13 |
| 10 | ಹೊಸಪೇಟೆ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 75.00 | 42.52 | 4202 |
| 11 | ಹೂವಿನಹಡಗಲಿ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 75.00 | 42.52 | 4202 |
| 12 | ತೆಕ್ಕಲಿಕೋಟೆ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 100.00 | 71.45 | RIDF-13 |
| 13 | ಹೆಸರಘಟ್ಟ, ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 25.00 | 17.88 | RIDF-13 |
| 14 | ಹೆಚ್.ಎಸ್.ಆರ್. ಲೇಔಟ್, ಬೆಂಗಳೂರುಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ | 75.00 | 42.52 | 4202 |
| 15 | ತ್ಯಾಮಗೊಂಡ್ಲು. ಸರ್ಕಾರಿ ಪ್ರ.ದ. ಕಾಲೇಜು ಕಟ್ಟಡ ನಿರ್ಮಾಣ | 200.00 | 143.20 | RIDF-13 |

**ಷರತ್ತುಗಳು:–**

- ಸದರಿ ಕಾಮಗಾರಿಯನ್ನು ಈಗಾಗಲೇ ನಿಗದಿಯಾಗಿರುವ ಆಯವ್ಯಯದ ಮಿತಿಯಲ್ಲಿಯೇ ಪೂರ್ಣಗೊಳಿಸಲು ಸೂಚಿಸಿದೆ. ನಬಾರ್ಡ್ ಕಾಮಗಾರಿಗಳಿಗೆ ನಕ್ಷೆ ಬದಲಾಯಿಸಬೇಕಾದಲ್ಲಿ ನಬಾರ್ಡ್ ನಿಗದಿಪಡಿಸಿದ ಅಂದಾಜಿನಲ್ಲಿಯೇ ಸಲ್ಲಿಸಿ ನಬಾರ್ಡ್ ಅನುಮತಿ ಪಡೆಯತಕ್ಕದ್ದು.
- ಸದರಿ ಕಾಮಗಾರಿಗಳಿಗೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆ ಪಡೆದು 2008–09ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಬಳಸಿಕೊಂಡು ಕೂಡಲೇ ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮವಹಿಸುವಂತೆ ಸೂಚಿಸುವುದು.
- ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸಂಬಂಧಿಸಿದ ಕಾಲೇಜುಗಳ ಪ್ರಾಂಶುಪಾಲರಿಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.
- ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ಧಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.
- ಕಟ್ಟಡ ನಿರ್ಮಾಣ ಕಾಮಗಾರಿಯನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
- ಕಟ್ಟಡವನ್ನು ಪೂರ್ಣಗೊಳಿಸಿ ಕಾಲೇಜಿಗೆ ಹಸ್ತಾಂತರಿಸಿದ ನಂತರ ಸಂಬಂಧಿಸಿದ ಕಾಲೇಜಿನ ಪ್ರಾಂಶುಪಾಲರು ಪ್ರಮಾಣ ಪತ್ರವನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಅವರಿಗೆ ಸೂಚನೆ ನೀಡುವುದು.
- ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್. ವರದಿಯಲ್ಲಿ ನಮೂದಿಸತಕ್ಕದ್ದು.
- ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡಲು ಸೂಚಿಸಿದೆ.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಶಿಇ 2974 ಐಎಫ್ (ಬಿ&ಎ) 2009 ದಿನಾಂಕ 27–11–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್.ಮಾಗಿ**

ಪಿ.ಆರ್. 2805

ವಿಶೇಷಾಧಿಕಾರಿ ಮತ್ತು ಪದನಿಮಿತ್ತ,

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## HORTICULTURE SECRETARIAT

**Sub:** Implementation of "Scheme for Integrated Farming in Coconut for Productivity/ Improvement with Coconut Development Board Assistance (100% CDB)" – Issue of Additional Administrative Approval reg.

**Read:** 1) GO.NO. AHD 53 HPP 2009, dated 24.06.2009.
2) GO.NO. AHD 53 HPP 2009, dated 17.08.2009.
3) GO.NO. AHD 53 HPP 2009, dated 09.10.2009.
4) Director of Horticulture letter No. DH/PC/AHO-2/1/09-10-1523 dated 20.10.2009.

**Preamble:**

1. State Level Administrative Approval for implementing the Coconut Development Board Programmes for the components to be implemented by the Department of Horticulture has been accorded during the year 2009-10 vide Government Orders as below;

| Sl. NO. | Government Order and date | Amount (Rs. In Lakhs) | Read above |
|---|---|---|---|
| 1 | GO.No. AHD 53 HPP 2009, dated 24.06.2009 | 303.03 | 1 |
| 2 | GO.No. AHD 53 HPP 2009, dated 17.08.2009 | 32.33 | 2 |
| 3 | GO.No. AHD 53 HPP 2009, dated 09.10.2009 | 211.75 | 3 |
| | **TOTAL** | **547.11** | |

2. However, Coconut Development Board has indicated a total allocation of 635.33 lakhs for Karnataka State during 2009-10. Out of this Rs. 3.125 lakhs State share will be met under the Head of Account 2401-00-119-4-05-139.

3. The Director of Horticulture vide letter read at (4) above has requested to issue additional administrative approval for the remaining amount of Rs. 88.22 lakhs (635.33-547.11) in order to implement the component of maintenance of old plots.

4. The proposal of Director of Horticulture has been examined and hence this Order.

**Government Order No. AHD 53 HPP 2009, Bangalore, Dated: 4th December 2009**

1. Government is pleased to accord State Level Administrative Approval for implementing the Coconut Development Programmes with an additional allocation of Rs. 88.22 lakhs (Rupees Eighty Eight Lakhs and Twenty Two Thousands Only) during the year 2009-10. This will be implemented by the Department of Horticulture for the maintenance of 504 hectares of old demonstration plots with 100% CDB share.

2. The Coconut Development Board share of Rs. 88.22 lakhs will be met under the State Plan scheme namely, "Scheme for Integrated Farming in Coconut for productivity/Improvement with Coconut Development Board Assistance (100% CDB)" Head of Account 2401-00-108-2-35-100 (Financial Assistance/Relief).

3. Budget will be released as and when Coconut Development Board provides funds.

4. This order issues with the concurrence of Finance Department vide its Note No.ಆಇ 417 ವೆ4/ 2008 dated 11.08.2009.

By Order and in the Name of the Governor of Karnataka

**S. RAJU**

Under Secretary to Government, Horticulture Department.

P.R. 2806

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 597 ಸಅಸೇ 2009, ಬೆಂಗಳೂರು, ದಿನಾಂಕ 8ನೇ ಡಿಸೆಂಬರ್ 2009.**

**ವಿಷಯ:** ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಮುಖ್ಯಮಂತ್ರಿಯವರ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಮುಖ್ಯಮಂತ್ರಿಯವರ ಕಾರ್ಯದರ್ಶಿಯ ಒಂದು ಹುದ್ದೆಯನ್ನು ವೇತನ ಶ್ರೇಣಿ Pay Band-4 Rs. 37400 – 67000 Plus Grade Pay Rs. 10000 ರಲ್ಲಿ ದಿನಾಂಕ 6–11–2009ರಿಂದ ಅನ್ವಯವಾಗುವಂತೆ ಹಾಗೂ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಈ ಮೂಲಕ ಸೃಜಿಸಲಾಗಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯೊಡನೆ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 2178 : ಸೇವೆಗಳು–3:2009, ದಿನಾಂಕ 3–12–2009ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್. 2807

**ವಿಷಯ:** ಶ್ರೀ ಎಂ. ನಾಗರಾಜ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಕೆ.ಎಂ. ಶಂಕರಯ್ಯ, ಉಪ ತಹಶೀಲ್ದಾರ್, ಶ್ರೀ ಬಿ.ಎಂ. ಶಿವಲಿಂಗಸ್ವಾಮಿ, ಪ್ರಥಮ ದರ್ಜೆ ಸಹಾಯಕ, ಶ್ರೀ ಎಸ್ ದೇವಯ್ಯ, ನಿವೃತ್ತ ಕಛೇರಿ ಸಹಾಯಕ ಇವರುಗಳ ವಿರುದ್ಧ ಜಂಟೀ ಇಲಾಖಾ ವಿಚಾರಣೆ– ಅಂತಿಮ ಆದೇಶ.

**ಓದಲಾಗಿದೆ:** 1) ದಿನಾಂಕ: 07–10–06ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 105 ಎಸ್ಇಎನ್ 05

2) ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ: 27–09–07

3) ದಿನಾಂಕ: 03–01–08ರ ನೋಟೀಸು ಸಂಖ್ಯೆ: ಸಿಆಸುಇ 052 ಕೆಇವಿ 07

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಂ. ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಅಂದಿನ ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು, ಶ್ರೀ ಕೆ.ಎಂ. ಶಂಕರಯ್ಯ ಉಪ ತಹಶೀಲ್ದಾರ್, ಶ್ರೀ ಬಿ.ಎಂ. ಶಿವಲಿಂಗಸ್ವಾಮಿ, ಪ್ರಥಮ ದರ್ಜೆ ಸಹಾಯಕ ಮತ್ತು ಶ್ರೀ ಎಸ್ ದೇವಯ್ಯ, ನಿವೃತ್ತ ಕಛೇರಿ ಸಹಾಯಕ, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಇವರುಗಳ ವಿರುದ್ಧ ಚಾಮರಾಜನಗರ ಜಿಲ್ಲೆಯ ಕಂದಾಯ ಘಟಕದಲ್ಲಿ ಯಾವುದೇ ನೇಮಕಾತಿ ಮಾಡದಿದ್ದರೂ ಹಾಗೂ ಬ್ಯಾಕ್ ಲಾಗ್ ಹುದ್ದೆಗಳು ಸೃಷ್ಟಿಯಾಗಿಲ್ಲದಿದ್ದರೂ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳಿಗೆ ಮೀಸಲಿರಿಸಿ ಭರ್ತಿ ಮಾಡದ ಖಾಲಿ ಹುದ್ದೆಗಳ ವಿಶೇಷ ನೇಮಕಾತಿ ನಿಯಮ 2001 ರನ್ವಯ ಹುದ್ದೆಗಳನ್ನು ಭರ್ತಿ ಮಾಡಲು ಅಧಿಸೂಚನೆ ಹೊರಡಿಸುವ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡಿ ಅಕ್ರಮವಾಗಿ ಅಧಿಸೂಚನೆ ಹೊರಡಿಸಿ ಅನರ್ಹ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳಲು ಕಾರಣರಾಗಿರುವ ಆರೋಪದ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಜಂಟಿ ಇಲಾಖಾ ವಿಚಾರಣೆ ಮುಂದುವರಿಸಿ, ಶ್ರೀ ಟಿ.ಎಸ್. ಪಾಲನೇತ್ರ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಇದರಂತೆ (1) ಶ್ರೀ ಎಂ ನಾಗರಾಜ, ಕೆಎಎಸ್ ಅಧಿಕಾರಿಯು ಚಾಮರಾಜನಗರ ಜಿಲ್ಲೆಯ ಕಂದಾಯ ಘಟಕದಲ್ಲಿ ಯಾವುದೇ ಬ್ಯಾಕ್‌ಲಾಗ್ ಹುದ್ದೆಗಳು ಸೃಷ್ಟಿಯಾಗಿಲ್ಲದಿದ್ದರೂ ಕೆಳಹಂತದ ಅಧಿಕಾರಿಗಳು ಸಲ್ಲಿಸಿದ ಪ್ರಸ್ತಾವನೆಯನ್ನು ಜಾರಿಯಲ್ಲಿರುವ ನಿಯಮಾವಳಿಗಳನ್ವಯ ತಮ್ಮ ಹಂತದಲ್ಲಿ ಪರಿಶೀಲಿಸದೆ, ನಿಯಮಾವಳಿಗಳು ಜಾರಿಗೆ ಬಂದ ದಿನಾಂಕದಿಂದ ಖಾಲಿ ಹುದ್ದೆಗಳ ಲೆಕ್ಕ ಹಾಕುವ ಬದಲು ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಲೆಕ್ಕ ಹಾಕುವ ಮೂಲಕ ಹುದ್ದೆಗಳು ಖಾಲಿ ಇಲ್ಲದಿದ್ದರೂ ನೇಮಕಾತಿಗೆ ಅಧಿಸೂಚನೆ ಹೊರಡಿಸಲು ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡುವ ಮೂಲಕ ಅನರ್ಹ ಅಭ್ಯರ್ಥಿಗಳು ಆಯ್ಕೆಗೊಳ್ಳಲು ಕಾರಣಕರ್ತರಾಗಿದ್ದು, ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (2) ಶ್ರೀ ಕೆ ಎಂ ಶಂಕರಯ್ಯ, ಇವರಿಗೆ ಅಧಿಸೂಚನೆ ಹೊರಡಿಸುವ ಹಂತದವರೆಗಿನ ಎಲ್ಲ ವಿದ್ಯಮಾನಗಳು ತಿಳಿದಿದ್ದರೂ ಕೆಳಹಂತದಿಂದ ಮಂಡಿಸಲಾದ ಕಛೇರಿ ಟಿಪ್ಪಣಿಯನ್ನು ವಿವೇಚನೆಯಿಂದ ಪರಿಶೀಲಿಸಿ ವಾಸ್ತವಿಕತೆ ಬಗ್ಗೆ ತಮ್ಮ ಟಿಪ್ಪಣಿಯ ಸಹಿತ ಮೇಲಧಿಕಾರಿಗಳಿಗೆ ಸಲ್ಲಿಸುವಲ್ಲಿ ವಿಫಲರಾಗುವ ಮೂಲಕ ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (3) ಶ್ರೀ ದೇವಯ್ಯ ಇವರು ಅಧಿಸೂಚನೆ ಪ್ರಕಟಣೆ ಹೊರಡಿಸಲು ಟಿಪ್ಪಣಿಯಲ್ಲಿ ಸ್ಪಷ್ಟವಾಗಿ ತಮ್ಮ ಅಭಿಪ್ರಾಯ ದಾಖಲಿಸಿ ತಪ್ಪು ಮಾರ್ಗದರ್ಶನ ನೀಡುವ ಮೂಲಕ ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (4) ಶ್ರೀ ಬಿ.ಎಸ್. ಶಿವಲಿಂಗಸ್ವಾಮಿ ಇವರು ಅಧಿಸೂಚನೆ

ಪ್ರಕಟಿಸುವ ಸಂಬಂಧ ಪೂರ್ಣ ಕಛೇರಿ ಟಿಪ್ಪಣಿಯನ್ನು ಸಿದ್ಧಪಡಿಸಿರುತ್ತಾರೆ. ಚಾಲ್ತಿ ನೀತಿ/ನಿಯಮಾವಳಿಗಳನ್ನು ಟಿಪ್ಪಣಿಯಲ್ಲಿ ಸ್ಪಷ್ಟವಾಗಿ ನಮೂದಿಸಿರುವುದಿಲ್ಲ ನೇಮಕಾತಿ ಪ್ರಕ್ರಿಯೆ ಕುರಿತಂತೆ ಯಾವುದೇ ತೃಪ್ತಿದಾಯಕವಾದ ಸಾಕ್ಷ್ಯಾಧಾರಗಳನ್ನು ಒದಗಿಸುವಲ್ಲಿ ವಿಫಲರಾಗುವ ಮೂಲಕ ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ.

ವಿಚಾರಣಾ ವರದಿಯನ್ನು ಪರಿಶೀಲಿಸಿ ಸರ್ಕಾರವು ಅಂಗೀಕರಿಸುತ್ತಾ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ವಿಚಾರಣಾ ವರದಿಯ ಬಗ್ಗೆ ಶ್ರೀ ಎಂ. ನಾಗರಾಜ, ಶ್ರೀ ಬಿ.ಎಸ್. ಶಿವಲಿಂಗಸ್ವಾಮಿ, ಶ್ರೀ ಎಸ್. ದೇವಯ್ಯ ಮತ್ತು ಶ್ರೀ ಕೆ.ಎಂ. ಶಂಕರಯ್ಯ ರವರುಗಳು ಸಲ್ಲಿಸಿದ ಲಿಖಿತ ಅಹವಾಲು ಯಾವುದೇ ಸಮರ್ಥನೆಯಿಂದ ಕೂಡಿರುವುದಿಲ್ಲವೆಂದು ಪರಿಗಣಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 052 ಕೆಇವಿ 07, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ

1. ನಿಯಮ 8 (ii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ. ನಾಗರಾಜು, ಕೆಎಎಸ್ (ಕಿರಿಯ ಶ್ರೇಣಿ) ಅಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ (ಹಾಲಿ ಉಪ ವಿಭಾಗಾಧಿಕಾರಿ, ರಾಮನಗರ ಉಪ ವಿಭಾಗ, ರಾಮನಗರ) ಇವರಿಗೆ ವಾಗ್ದಂಡನೆ ವಿಧಿಸಿದೆ.
2. ನಿಯಮ 8 (iv-a) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಎಸ್. ಶಿವಲಿಂಗಸ್ವಾಮಿ, ಅಂದಿನ ಪ್ರಥಮ ದರ್ಜೆ ಸಹಾಯಕ, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರಿಗೆ ಇವರ ವೇತನವನ್ನು ದಿನಾಂಕ: 30–04–2010 ರವರೆಗೆ ಒಂದು ಹಂತ ಕೆಳಕ್ಕಿಳಿಸುವ ಮತ್ತು ದಂಡನೆಯ ಅವಧಿ ಮುಗಿದ ನಂತರ ಇವರ ವೇತನವು ಪೂರ್ವಸ್ಥಿತಿಗೆ ಬರುವ ದಂಡನೆ ವಿಧಿಸಿದೆ.
3. ನಿಯಮ 8 (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಎಂ. ಶಂಕರಯ್ಯ ಅಂದಿನ ಶಿರಸ್ತೇದಾರ್, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರಿಗೆ ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆ ವಿಧಿಸಿದೆ.

ಶ್ರೀ ಎಸ್ ದೇವಯ್ಯರವರು ಸೇವೆಯಿಂದ ನಿವೃತ್ತರಾಗಿರುವುದರಿಂದ, ಇವರಿಗೆ ದಂಡನೆ ವಿಧಿಸುವ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ನಾಗೇಂದ್ರ**
ಪಿ.ಆರ್. 2808 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## COMMERCE AND INDUSTRIES SECRETARIAT

**No. CI 59 SPI 2009, Bangalore, Dated: 4th December 2009**

**AMENDMENT**

**Sub:** The Project Proposal of M/S Narayana Health Academy Pvt. Ltd, Bangalore to establish an "Education City" at Henagara – Hosahalli Village, Bangalore Urban District Change of Survey numbers reg

**Read:** 1) G.O. No. CI 119 SPI 2008, Bangalore dated 7-05-2008.
2) Proceedings of the 17th State High Level Clearance, Committee (SHLCC) meeting held on 28-1-2009.
3) Letter No. KUM/SHLCC/AD/409/(06-07)/2008-09 Dated 07-03-2009..

The Survey Numbers indicated in the Annexure of the Government Order No. CI 119 SPI 2008 Bangalore dated 07-05-2008 are substituted by new survey Numbers indicated below.

Sy. Nos. 2 to 8,9,10,40,42& 43 in 30 acres of land in Henagara, Hosahalli Village. Anekal Taluk, Bangalore and Project Proponents to bring Consent for a minimum of 80% of the extent for KIADB to go for consent acquisition.

By Order and in the name of the Governor of Karnataka
**APARNA PAVATE**
P.R. 2809 Desk Officer (Technical Cell)
Commerce & Industries Department

**ಸಹಕಾರ ಸಚಿವಾಲಯ**

**ವಿಷಯ:** ಅಖಿಲ ವೀರಶೈವ ಮಂಡಳಿ, ನಂಜನಗೂಡು, ಈ ಸಂಘಕ್ಕೆ ಆಡಳಿತಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸಹಕಾರ ಸಂಘಗಳ ನಿಬಂಧಕರವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/299/ಎಸ್‌ಓಆರ್/2008–09 ದಿನಾಂಕ: 31–01–2009.

2) ಕಾರಣ ಕೇಳುವ ನೋಟೀಸ್ ದಿನಾಂಕ: 09/ 11–03–2009.

3) ಕಾರ್ಯದರ್ಶಿ ಅಖಿಲ ವೀರಶೈವ ಮಂಡಳಿ, ನಂಜನಗೂಡು, ಇವರು ಕಾರಣ ಕೇಳುವ ನೋಟೀಸ್‌ಗೆ ನೀಡಿರುವ ಉತ್ತರ ದಿನಾಂಕ: ಇಲ್ಲ

4) ಸಹಕಾರ ಸಂಘಗಳ ನಿಬಂಧಕರ ಕಛೇರಿ ಬೆಂಗಳೂರು ಇವರ ಪತ್ರ ಸಂಖ್ಯೆ ಆರ್‌ಸಿಎಸ್/ಎಡಿಎಂ/299/ಎಸ್‌ಓಆರ್/2008–09 ದಿನಾಂಕ:03/ 10–11–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 31–01–2009 ರ ಪತ್ರದಲ್ಲಿ ಅಖಿಲ ವೀರಶೈವ ಮಂಡಳಿ, ನಂಜನಗೂಡು, ಈ ಸಂಘದಲ್ಲಿ ಕಾಯ್ದೆ ಬದ್ಧವಾಗಿ ಆಡಳಿತ ಮಂಡಳಿ ಆಯ್ಕೆಯಾಗಿಲ್ಲದೇ ಕಾನೂನು ಬಾಹಿರವಾಗಿ ಮುಂದುವರಿಯುತ್ತಿರುವುದರಿಂದ, ಸಾರ್ವಜನಿಕ ಹಿತದೃಷ್ಟಿಯಿಂದ ಸಂಘಕ್ಕೆ ಕರ್ನಾಟಕ ಸಂಘಗಳ ಕಾಯ್ದೆ 1960ರ ಕಲಂ 27 (ಎ) 1 (ಬಿ)ರ ಮೇರೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಸಹಕಾರ ಸಂಘಗಳ ಉಪನಿಬಂಧಕರು, ಮೈಸೂರು ಜಿಲ್ಲೆ, ಮೈಸೂರು ರವರ ಪ್ರಸ್ತಾವನೆಯಂತೆ ಸಂಘದ ವ್ಯವಹಾರದ ಬಗ್ಗೆ ನಡೆಸಲಾದ ವಿಚಾರಣಾ ವರದಿಯಲ್ಲಿ ಸಾರ್ವಜನಿಕರ ಹಣ ದುರುಪಯೋಗ ಮಾಡಿಕೊಂಡಿರುವುದು ಕಂಡು ಬಂದಿದೆ ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ) 1 (ಬಿ)ರ ಪ್ರಕಾರ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿ ಅಧ್ಯಕ್ಷರು/ಕಾರ್ಯದರ್ಶಿಗಳು ಅಖಿಲ ವೀರಶೈವ ಮಂಡಳಿ, ನಂಜನಗೂಡು ರವರಿಗೆ ಕಾರಣ ಕೇಳುವ ಸೂಚನಾ ಪತ್ರವನ್ನು ಕಳುಹಿಸಿ ಸಾರ್ವಜನಿಕರ ಹಣ ದುರುಪಯೋಗ ಮಾಡಿಕೊಂಡಿರುವುದು ಕಂಡು ಬಂದಿದ್ದು, ನೋಂದಾಣಿ ಕಾಯ್ದೆಯ ಕಲಂ 11, 12 ಮತ್ತು 13ನ್ನು ಉಲ್ಲಂಘನೆಯಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27 (ಎ) ಪ್ರಕಾರ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ ಹೇಳಿಕೆಯನ್ನು ಸೂಚನಾ ಪತ್ರ ತಲುಪಿದ 15 ದಿವಸಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ತಿಳಿಸಿ ಪತ್ರವನ್ನು ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ಕಾರ್ಯದರ್ಶಿ, ಅಖಿಲ ವೀರಶೈವ ಮಂಡಳಿ, ನಂಜನಗೂಡು ರವರು ಸರ್ಕಾರಕ್ಕೆ ಕಾರಣ ಕೇಳುವ ಸೂಚನಾ ಪತ್ರಕ್ಕೆ ಉತ್ತರ ನೀಡುತ್ತಾ ವಿಚಾರಣಾಧಿಕಾರಿಗಳವರ ಅಭಿಪ್ರಾಯದ ವರದಿಯನ್ನು ತಿರಸ್ಕರಿಸಿ ಪ್ರಕರಣವನ್ನು ಮುಕ್ತಾಯಗೊಳಿಸಬೇಕೆಂತಲೂ ಅಥವಾ ಮರು ಪರಿಶೀಲನೆಗಾಗಿ ವಿಚಾರಣೆ ಮಾಡಲು ಸಂಬಂಧಿಸಿದ ಇಲಾಖೆಯು ನಿರ್ದೇಶನ ನೀಡಬೇಕೆಂದು ಕೋರಿಕೊಂಡಿರುತ್ತಾರೆ. ಸದರಿ ಉತ್ತರವನ್ನು ಸಹಕಾರ ಸಂಘಗಳ ನಿಬಂಧಕರಿಗೆ ಕಳುಹಿಸಿಕೊಡುತ್ತಾ ಹೇಳಿಕೆಯನ್ನು ಪರಿಶೀಲಿಸಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ ಸ್ಪಷ್ಟ ಅಭಿಪ್ರಾಯವನ್ನು ನೀಡಲು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಹಾಗೂ ಸಂಘ ಸಂಸ್ಥೆಗಳ ಜಿಲ್ಲಾ ನೋಂದಣಾಧಿಕಾರಿಗಳು ಮೈಸೂರು ರವರ ವರದಿಯನ್ನು ಪರಿಶೀಲಿಸಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 25ರನ್ವಯ ನಡೆಸಿರುವ ವಿಚಾರಣಾ ವರದಿಯನ್ವಯ ಸದರಿ ಸಂಸ್ಥೆಗೆ ಜರೂರಾಗಿ ಆಡಳಿತಾಧಿಕಾರಿಯನ್ನು ನೇಮಿಸಿ ಸಂಘದ ಹಣಕಾಸು ವಸ್ತು ಸ್ಥಿತಿಯನ್ನು ಹಾಗೂ ಹಣದುರುಪಯೋಗ ತಡೆಯಲು ಸ್ಥಿರ ಮತ್ತು ಚರಾಸ್ತಿಗಳನ್ನು ರಕ್ಷಿಸಲು ಮತ್ತು ಚುನಾವಣೆಯ ಮೂಲಕ ಹೊಸ ಪದಾಧಿಕಾರಿಗಳನ್ನು ನೇಮಕಗೊಳ್ಳುವಂತೆ ಸಮಿತಿಗೆ ಸಹಾಯ ಮಾಡಲು ಆಡಳಿತಾಧಿಕಾರಿಯವರನ್ನು ನೇಮಿಸುವುದು ಸೂಕ್ತವೆಂದು ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 37 ಸಿಎಸ್‌ಅರ್ 2009, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಅಖಿಲ ವೀರಶೈವ ಮಂಡಳಿ, ನಂಜನಗೂಡು ಈ ಸಂಘದ ಹಣಕಾಸು ವಸ್ತು ಸ್ಥಿತಿಯನ್ನು ಹಾಗೂ ಹಣದುರುಪಯೋಗ ತಡೆದು ಸ್ಥಿರ ಮತ್ತು ಚರಾಸ್ಥಿಗಳನ್ನು ರಕ್ಷಿಸಲು ಹಾಗೂ ಚುನಾವಣೆಯ ಮೂಲಕ ಹೊಸ ಪದಾಧಿಕಾರಿಗಳನ್ನು ನೇಮಿಸಬೇಕಾಗಿರುವುದರಿಂದ ಈ ಸಂಸ್ಥೆಯ ಹಿತದೃಷ್ಟಿಯಿಂದ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಾಣಿ ಕಾಯ್ದೆ 1960 ಕಲಂ 27 (ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ಆರು (6) ತಿಂಗಳ ಅವಧಿಗೆ

ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ನೋಂದಾಯಿತವಾಗಿರುವ ಸದಸ್ಯರುಗಳಿಂದ ಚುನಾವಣೆ ನಡೆಸಿ ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2810

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಪಿ. ನಾಗರಾಜು, ಎ.ಸಿ.ಪಿ., ಸಿ.ಎ.ಆರ್. ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(5)14/2008–09 ದಿನಾಂಕ: 28–01–2009

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 28–03–09

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(5)14/2008–09 ದಿನಾಂಕ: 04–06–2009

4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 98 ಸಿಎನ್‌ಎಸ್ 09 ದಿನಾಂಕ:20.10.09

**ಪ್ರಸ್ತಾವನೆ:**

ಶ್ರೀ ಪಿ. ನಾಗರಾಜು, ಎ.ಸಿ.ಪಿ., ಸಿ.ಎ.ಆರ್. ಬೆಂಗಳೂರು, ಇವರು ರಿಸರ್ವ್ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಭದ್ರಾವತಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಚ್ಯುತಿ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

ಶ್ರೀ ಪಿ. ನಾಗರಾಜು, ಎ.ಸಿ.ಪಿ., ಸಿ.ಎ.ಆರ್. ಉತ್ತರ, ಬೆಂಗಳೂರು, ಆದ ನೀವು ಹಿಂದೆ 2000 ರಿಂದ 2004 ರವರೆಗೆ ಆರ್.ಪಿ.ಐ., ಆಗಿ ಭದ್ರಾವತಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಹಣ ಪಾವತಿಸಿದ ಅಕ್ವಿಟೆನ್ಸ್‌ಗಳನ್ನು ಸರಿಯಾಗಿ ಪರಿಶೀಲಿಸದೆ, ಕೆಲವು ಅಕ್ವಿಟೆನ್ಸ್‌ಗಳ ಕೊನೆಯಲ್ಲಿ ಸಹಿ ಮಾಡದೇ ಡಿ.ಪಿ.ಓ.ಗೆ ಕಳುಹಿಸಿಕೊಟ್ಟು, ಕರ್ತವ್ಯಲೋಪ ಎಸಗಿರುವುದಲ್ಲದೆ. ದಿ: 26–02–2005ರಂದು ಶ್ರೀ ಎಂ.ಎಸ್. ನಿತ್ಯಾನಂದ, ಎ.ಪಿ.ಸಿ., 132, ರವರಿಂದ ತಪ್ಪೊಪ್ಪಿಗೆ ಪತ್ರವನ್ನು ಬರೆಯಿಸಿಕೊಂಡು, ವಿಚಾರಣೆ ಕಾಲದಲ್ಲಿ ಹಾಜರುಪಡಿಸಿರುತ್ತೀರಿ. ತಪ್ಪೊಪ್ಪಿಗೆ ಪತ್ರ ಬರೆಸಿಕೊಳ್ಳುವ ಬದಲು, ಆ ವೇಳೆಯಲ್ಲಿ ಸಂಬಂಧಪಟ್ಟ ಅವರ ವಿರುದ್ಧ ಶಿಸ್ತುಕ್ರಮ ತೆಗೆದುಕೊಳ್ಳುವಂತೆ ನಿಮ್ಮ ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸುವುದು ನಿಮ್ಮ ಆದ್ಯ ಕರ್ತವ್ಯವಾಗಿತ್ತು. ಆದರೆ, ಹಾಗೆ ಮಾಡುವ ಬದಲು, ತಪ್ಪೊಪ್ಪಿಗೆ ಪತ್ರವನ್ನು ಶ್ರೀ ಎಂ.ಎಸ್. ನಿತ್ಯಾನಂದ, ಎ.ಪಿ.ಸಿ.–132, ರವರ ಮೇಲಿನ ಇಲಾಖಾ ವಿಚಾರಣೆ ಕಾಲದಲ್ಲಿ ಹಾಜರುಪಡಿಸುವ ಮೂಲಕ ನಿಮ್ಮ ಕರ್ತವ್ಯದಲ್ಲಿ ಕರ್ತವ್ಯಚ್ಯುತಿ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗ ಪಡಿಸಿಕೊಂಡಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡಿ.ಜಿ ಮತ್ತು ಐ.ಜಿ.ಪಿ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 28–01–09ರ ಆದೇಶದಲ್ಲಿ "ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ".

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಘಟನೆಯಲ್ಲಿ ಅರ್ಜಿದಾರರ ಪಾತ್ರವನ್ನು ಗಮನಿಸಿದಲ್ಲಿ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಸರ್ಕಾರವು ತೀರ್ಮಾನಿಸಿ, ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 80 ಪೊಸಿಅ 2009, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ. ನಾಗರಾಜು, ಎ.ಸಿ.ಪಿ., ಸಿ.ಎ.ಆರ್. ಬೆಂಗಳೂರು, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 28-01-09ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ "ವಾಗ್ದಂಡನೆ"ಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2811

**ವಿಷಯ:** ಶ್ರೀ ತಿಮ್ಮಯ್ಯ, ಎ.ಎಸ್.ಐ ವಿಧಾನ ಸೌಧ, ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಉಪ ಪೊಲೀಸ್ ಆಯುಕ್ತರು, (ಕಾ.ಸು) ಬೆಂಗಳೂರು, ಇವರ ಆದೇಶ ಸಂಖ್ಯೆ: 50/ಡಿಇ/ಆರ್6/86/ ದಿನಾಂಕ: 04-12-87
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/15/88-89 ಓ.ಬಿ: 41/88/ ದಿ: 16-06-88
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 22-03-06
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)53/2006-07 ದಿನಾಂಕ: 19-11-2006
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 26 ಸಿಎನ್‌ಎಸ್ 09 ದಿನಾಂಕ:20.10.09

**ಪ್ರಸ್ತಾವನೆ:**

ಶ್ರೀ ತಿಮ್ಮಯ್ಯ, ಎ.ಎಸ್.ಐ ವಿಧಾನ ಸೌಧ, ಬೆಂಗಳೂರು, ಇವರು ರಾಜಾಜಿನಗರ ಪೊಲೀಸ್ ಠಾಣೆ ಬೆಂಗಳೂರು, ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ದಿನಾಂಕ: 03-05-1986ರ ರಾತ್ರಿ ಸಮಯ 12-15 ಘಂಟೆಯಲ್ಲಿ ಆಟೋ ಚಾಲಕರಾದ ಶ್ರೀ ಕೆ.ಎನ್. ಮಧುಸೂದನ್ ಮತ್ತು ಶ್ರೀ ವಿ.ಆರ್. ಗಂಗಾಧರ್ ಎಂಬುವವರನ್ನು ಮದ್ಯದ ಅಮಲಿನಲ್ಲಿ ಹೊಡೆದಿರುವುದು".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿರುವುದಿಲ್ಲವೆಂದು ಸಲ್ಲಿಸಿದ ವರದಿಯನ್ನು ಶಿಸ್ತು ಪ್ರಾಧಿಕಾರವು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, (ಕಾ.ಸು) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 04-12-87ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಐದು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ದಕ್ಕೆಯಾಗುವಂತೆ ಮುಂದೂಡಿದ್ದಾರೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 16-06-88ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಪರಿಶೀಲಿಸಲಾಗಿದೆ. ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ, ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಲು ಆಗಿರುವ ವಿಳಂಬವನ್ನು ಮನ್ನಾ ಮಾಡಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಭಾಗಶಃ ಪುರಸ್ಕರಿಸುವ ಕುರಿತು ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 505 ಪೊಸಿಅ 2006, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ತಿಮ್ಮಯ್ಯ, ಎ.ಎಸ್.ಐ ವಿಧಾನ ಸೌಧ, ಪೊಲೀಸ್ ಠಾಣೆ, ಬೆಂಗಳೂರು, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 04–12–87ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಿ ಆದೇಶಿಸಿದೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2812

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಮಟ್ಟದ ಅಡ್ವೋಕೇಟ್ ಕ್ಲರ್ಕ್ಸ್ ಕ್ಷೇಮಾಭಿವೃದ್ಧಿ ನಿಧಿಗಾಗಿ ಪ್ರಾರಂಭಿಕ ಠೇವಣಿಯಾಗಿ ಸಹಾಯಾನುದಾನ ಬಿಡುಗಡೆ ಕುರಿತು.

**ಓದಲಾಗಿದೆ:** 1) ರಿಟ್ ಅರ್ಜಿ ಸಂಖ್ಯೆ 20740/2005ರ ಮೇಲೆ ಉಚ್ಚ ನ್ಯಾಯಾಲಯದ ದಿನಾಂಕ: 09–07–2009ರ ಆದೇಶ.

2) ಅಧಿಸೂಚನೆ ಸಂಖ್ಯೆ ಲಾ 208 ಎಲ್‌ಸಿಎಲ್ 2005(P) ದಿನಾಂಕ: 18–07–2009 (ವಕೀಲರ ಗುಮಾಸ್ತರ ಕ್ಷೇಮಾಭಿವೃದ್ಧಿ ನಿಯಮಗಳು)

**ಪ್ರಸ್ತಾವನೆ:**

ಅಧ್ಯಕ್ಷರು, ಕರ್ನಾಟಕ ರಾಜ್ಯ ಮಟ್ಟದ ಅಡ್ವೋಕೇಟ್ ಕ್ಲರ್ಕ್ಸ್ ಸಂಘರವರು ಕರ್ನಾಟಕ ವಕೀಲರ ಕ್ಷೇಮಾಭಿವೃದ್ಧಿ ಅಧಿನಿಯಮ 1983ರ (1985ರ ಕರ್ನಾಟಕ ಆಕ್ಟ್ ನಂ.2) ಸೆಕ್ಷನ್ 27ರನ್ವಯ ವಕೀಲರ ಸಹಾಯಕರ ಕ್ಷೇಮಾಭಿವೃದ್ಧಿ ನಿಧಿಯನ್ನು ಅವರ ನಿವೃತ್ತಿ ಸೌಲಭ್ಯಗಳಿಗಾಗಿ ಸ್ಥಾಪಿಸಿ ನಿಯಮಗಳನ್ನು ರಚಿಸುವ ಸಲುವಾಗಿ ಸರ್ಕಾರ ಹಾಗೂ ವಕೀಲರ ಪರಿಷತ್ತನ್ನು ಪ್ರತಿವಾದಿಗಳನ್ನಾಗಿ ಮಾಡಿ ರಿಟ್ ಪಿಟಿಷನ್ ಸಂಖ್ಯೆ 20740/2005ನ್ನು ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದರು.

ವಕೀಲರು ಅವರ ಕೆಲಸಗಳಿಗಾಗಿ ವಕೀಲರ ಸಹಾಯಕರನ್ನು ನೇಮಿಸಿಕೊಂಡಿದ್ದು ಸರ್ಕಾರ ನೇಮಕಾತಿಗೊಳಿಸಿರುವುದಿಲ್ಲವಾದ್ದರಿಂದ ಅವರ ಸೇವೆಯು ಕೆ.ಸಿ.ಎಸ್.ಆರ್ ನಿಯಮಗಳ ವ್ಯಾಪ್ತಿಗೊಳಪಡುವುದಿಲ್ಲವಾದ್ದರಿಂದ ವಕೀಲರ ಪರಿಷತ್ತು ವಕೀಲರ ಕ್ಷೇಮಾಭಿವೃದ್ಧಿ ನಿಧಿ ನಿರ್ವಹಿಸುತ್ತಿರುವಂತೆ ವಕೀಲರಿಗಾಗಿ ದುಡಿಯುತ್ತಿರುವ ವಕೀಲರ ಸಹಾಯಕರ ಕ್ಷೇಮಾಭಿವೃದ್ಧಿ ನಿಧಿಯನ್ನು ಸ್ಥಾಪಿಸಿ ನಿರ್ವಹಿಸಲು ಮುಂದೆ ಬಂದಲ್ಲಿ ನಿಯಮಗಳನ್ನು ರಚಿಸಲು ಸರ್ಕಾರದಲ್ಲಿ ಯಾವುದೇ ವಿರೋಧವಿರುವುದಿಲ್ಲವೆಂದು ಉಚ್ಚ ನ್ಯಾಯಾಲಯಕ್ಕೆ ತಿಳಿಸಿ, ಕರಡು ನಿಯಮಗಳ ಪ್ರತಿಯನ್ನು ಒದಗಿಸಲಾಗಿತ್ತು. ಅದರಂತೆ, ಉಚ್ಚ ನ್ಯಾಯಾಲಯವು ಉಲ್ಲೇಖಿತ (1)ರ ದಿನಾಂಕ: 09–07–2009ರ ಆದೇಶದಲ್ಲಿ, ನೀಡಿದ ನಿರ್ದೇಶನದಂತೆ ಪುನಃ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಅಡ್ವೋಕೇಟ್ ಜನರಲ್ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ನ ಅಧ್ಯಕ್ಷರು, ಕಾರ್ಯದರ್ಶಿಗಳು ಮತ್ತು ವಕೀಲರ ಸಹಾಯಕರ ಸಂಘದ ಅಧ್ಯಕ್ಷರು ಹಾಗೂ ಪದಾಧಿಕಾರಿಗಳೊಂದಿಗೆ ಹಲವು ಬಾರಿ ಸಭೆ ನಡೆಸಿ ಒಮ್ಮತಕ್ಕೆ ಬಂದು ಕರಡು ನಿಯಮಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಿರುವುದರಿಂದ ವಕೀಲರು ನೇಮಿಸಿಕೊಂಡ ಗುಮಾಸ್ತರು ಅವರಿಗಾಗಿಯೇ ಕೆಲಸ ನಿರ್ವಹಿಸುವುದರಿಂದ ನಿಧಿ ಕ್ರೂಢೀಕರಣಕ್ಕೆ ಪರಿಷತ್ತಿನ ವಕೀಲರೆಲ್ಲರೂ ಸಹಕಾರ ನೀಡುವಂತೆ, ಹಾಗೂ ವಕೀಲರ ಗುಮಾಸ್ತರ ಸಂಘವು ನಿಶ್ಚಿತ ಹಾಗೂ ಎಸ್.ಬಿ. ಖಾತೆಯಲ್ಲಿಟ್ಟಿರುವ ಒಟ್ಟು ರೂ.1.50 ಲಕ್ಷಗಳನ್ನು ಅವರ ಕಲ್ಯಾಣ ನಿಧಿಗಾಗಿ ವಕೀಲರ ಪರಿಷತ್ತಿನ ಅಧ್ಯಕ್ಷತೆ ನಿಯಮಗಳ ರಚನೆ ನಂತರ ಹಸ್ತಾಂತರಿಸಲು ಮತ್ತು ಇತರ ಮೂಲಗಳಿಂದ ಕಲ್ಯಾಣ ನಿಧಿ ಸಂಗ್ರಹಿಸಿ ನಿಧಿಯನ್ನು ವಕೀಲರ ಪರಿಷತ್ತಿಗೆ ನೀಡಲು ನಿಧಿ ಸಂಗ್ರಹ ಹೆಚ್ಚಿಸಿಕೊಳ್ಳಲು ಮತ್ತು ಈ ಉದ್ದೇಶಕ್ಕಾಗಿ ಸರ್ಕಾರವು ವಕೀಲರ ಗುಮಾಸ್ತರ ಸಂಘವು ಪ್ರಾಥಮಿಕವಾಗಿ ನೀಡುವ ಮೊತ್ತಕ್ಕೆ ಅನುಗುಣವಾಗಿ ಸರ್ಕಾರದಿಂದ ಒಂದು ಬಾರಿಯ ಅನುದಾನವನ್ನಾಗಿ (One time grant) ನೀಡಲು ತೀರ್ಮಾನಿಸಲಾಯಿತು. ಅದರಂತೆ, ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗಿ 2009–10ನೇ ಸಾಲಿನ ಆಯವ್ಯಯದಲ್ಲಿ ವಕೀಲರ ಕ್ಷೇಮಾಭಿವೃದ್ಧಿಗಾಗಿ ಲೆಕ್ಕ ಶೀರ್ಷಿಕೆ 2014–00–114–0–03–104 (ಯೋಜನೆ) ಅಡಿ ರೂ. 10.00 ಲಕ್ಷಗಳನ್ನು ಒದಗಿಸಿದ್ದು, ಅದರಿಂದ ವಕೀಲರ ಗುಮಾಸ್ತರ ಕ್ಷೇಮಾಭಿವೃದ್ಧಿ ನಿಧಿಗೆ ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಸಹಮತಿಸಿದೆ. ಮತ್ತು ಉಲ್ಲೇಖಿತ (2)ರ ದಿನಾಂಕ: 18–07–2009ರ ಅಧಿಸೂಚನೆಯಲ್ಲಿ ವಕೀಲರ ಗುಮಾಸ್ತರ ಕ್ಷೇಮಾಭಿವೃದ್ಧಿ ನಿಯಮಗಳನ್ನು ರಚಿಸಲಾಗಿದೆ.

ಅದರಂತೆ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 208 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 9ನೇ ಡಿಸೆಂಬರ್ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರದಿಂದ ಕರ್ನಾಟಕ ವಕೀಲರ ಕ್ಲರ್ಕ್ಸ್ ವೆಲ್‌ಫೇರ್ ಫಂಡ್ ನಿಧಿಗೆ ರೂ. 10.00 ಲಕ್ಷಗಳನ್ನು (ರೂಪಾಯಿ ಹತ್ತು ಲಕ್ಷಗಳು ಮಾತ್ರ) ಒಂದು ಬಾರಿಯ ಅನುದಾನವನ್ನಾಗಿ ವಕೀಲರ ಪರಿಷತ್ತಿಗೆ ಕೆಳಕಂಡ ಷರತ್ತಿನೊಂದಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

1. ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ನಿಯಮಾನುಸಾರ ಬಳಸತಕ್ಕದ್ದು.
2. ಬಳಕೆ ಪ್ರಮಾಣ ಪತ್ರವನ್ನು ಅಡ್ವೋಕೇಟ್ ಜನರಲ್‌ರವರ ಮೂಲಕ ಅಂಕಿ ಅಂಶಗಳ ಸಹಿತ ಕಾಲಮಿತಿಯಲ್ಲಿ ನಿಯಮಾನುಸಾರ ಸಲ್ಲಿಸತಕ್ಕದ್ದು.
3. ವಕೀಲರ ಗುಮಾಸ್ತರ ಸಂಘದಿಂದ ಪ್ರಸ್ತಾವನೆಯಲ್ಲಿ ತಿಳಿಸಿರುವ ಪ್ರಾರಂಭಿಕ ಮೊತ್ತ ಪಡೆದು ನಿಧಿಯ ಲೆಕ್ಕಕ್ಕೆ ನಿಯಮಾನುಸಾರ ತೆಗೆದುಕೊಳ್ಳತಕ್ಕದ್ದು.

ಸದರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ 2014–00–114–0–03–104 (ಯೋಜನೆ) ಅಡಿ ಭರಿಸತಕ್ಕದ್ದು. ಈ ಹಣವನ್ನು ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಗಳು ಹಾಗೂ ಅಗಿಂದಾಗ್ಗೆ ಹೊರಡಿಸಿರುವ ತಿದ್ದುಪಡಿ ನಿಯಮಗಳಲ್ಲಿ ಸ್ಪಷ್ಟಪಡಿಸಿರುವಂತೆ ಅಡ್ವೋಕೇಟ್ ಜನರಲ್, ಕರ್ನಾಟಕ, ಬೆಂಗಳೂರವರಿಗೆ ಬಿಲ್ಲನ್ನು ಸಲ್ಲಿಸಿ ಹಣ ಪಾವತಿಸಿಕೊಳ್ಳಬಹುದಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 303 ವೆಚ್ಚ–10 2009 ದಿನಾಂಕ: 16–06–2009ರಲ್ಲಿ ನೀಡಿರುವ ಸಹಮತಿ ಹಾಗೂ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16–05–2008ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲ ಹೆಚ್.ಆರ್**

ಪಿ.ಆರ್. 2813

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಪರಿಶಿಷ್ಟ ಜಾತಿಯ ಕುಟುಂಬಗಳ ಸಮೀಕ್ಷೆ ನಡೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಸಕಇ 11 ಎಸ್‌ಎಡಿ 2007, ದಿನಾಂಕ: 23–08–2007

2) ಅರೆ ಸರ್ಕಾರಿ ಪತ್ರ ಸಂಖ್ಯೆ: ಕರಾ/ನ್ಯಾಸವಿಆ/ಸಿಆರ್–7/ 2009–10, ದಿನಾಂಕ: 29–08–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದ ಪ್ರಕಾರ ನ್ಯಾಯಮೂರ್ತಿ ಎ.ಜೆ.ಸದಾಶಿವ ವಿಚಾರಣಾ ಆಯೋಗವು ರಾಜ್ಯದಲ್ಲಿನ ಪರಿಶಿಷ್ಟ ಜಾತಿ ಜನರ ಸಾಮಾಜಿಕ ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳನ್ನು ಅರಿಯಲು ಹಾಗೂ ಸಂವಿಧಾನವು ಪರಿಶಿಷ್ಟ ಜಾತಿಯವರಿಗೆ ನೀಡಿರುವ ಸೌಲಭ್ಯಗಳು ಪರಿಶಿಷ್ಟ ಜಾತಿಯ ಉಪ ಜಾತಿಗಳಿಗೆ ತಲುಪಿವೆಯೇ ಎಂಬುದರ ಸಮೀಕ್ಷೆ ಹಾಗೂ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ವತಿಯಿಂದ ಹಿಂದುಳಿದ ಜಾತಿಗಳಿಗೆ ಸಂಬಂಧಿಸಿದಂತೆ ನಡೆಸುವ ಸಮೀಕ್ಷೆ ಇವುಗಳನ್ನು ಜಂಟಿಯಾಗಿ ನಡೆಸಬೇಕಾಗಿರುತ್ತದೆ.

ಕಾರ್ಯದರ್ಶಿ, ನ್ಯಾಯಮೂರ್ತಿ ಎ.ಜೆ. ಸದಾಶಿವ ವಿಚಾರಣಾ ಆಯೋಗ ಇವರು ಮೇಲೆ (2)ರಲ್ಲಿ ಓದಲಾದ ಪತ್ರ ಬರೆಯುತ್ತಾ ಪರಿಶಿಷ್ಟ ಜಾತಿ ಜನರಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಸಮೀಕ್ಷೆ ನಡೆಸಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

ಹಿಂದುಳಿದ ವರ್ಗಗಳ ವ್ಯಾಪ್ತಿಗೆ ಬರುವ ಜಾತಿಗಳಿಗೆ ಸಂಬಂಧಿಸಿದಂತೆ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಸಮೀಕ್ಷೆ ಪ್ರಾರಂಭಿಕ ಹಂತದಲ್ಲಿರುತ್ತದೆ. ಅದಲ್ಲದೆ, ಈ ಆಯೋಗಗಳು ಸಮೀಕ್ಷೆಗೆ ಅಳವಡಿಸಿಕೊಂಡಿರುವ ನಮೂನೆಗಳು ಭಿನ್ನವಾಗಿದ್ದು ಸಮೀಕ್ಷೆ ಉದ್ದೇಶವು ಬೇರೆ ಬೇರೆಯಾಗಿರುತ್ತವೆ.

ಈ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 11 ಎಸ್‌ಎಡಿ 2007, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2009**

ದಿನಾಂಕ: 23–08–2007ರ ಉಲ್ಲೇಖಿತ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ ನ್ಯಾಯಮೂರ್ತಿ ಎ.ಜೆ.ಸದಾಶಿವ ವಿಚಾರಣಾ ಆಯೋಗವು ರಾಜ್ಯದಲ್ಲಿ ಪರಿಶಿಷ್ಟ ಜಾತಿಗಳ ಜನರಿಗೆ ಸಂಬಂಧಿಸಿದಂತೆ ನಡೆಸಲು ಉದ್ದೇಶಿಸಿರುವ ಸಮೀಕ್ಷೆಯನ್ನು ಪ್ರತ್ಯೇಕವಾಗಿ ನಡೆಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ದಿನಾಂಕ:23.08.2007ರ ಆದೇಶಕ್ಕೆ ಬೇರೆ ಯಾವುದೇ ಬದಲಾವಣೆ ತರಲಾಗಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2815

**ಎಸ್. ಲೋಕನಾಥರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ–2, ಸಮಾಜ ಕಲ್ಯಾಣ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎಂ.ಎ. ಹಾಜಿಬಾಯಿ, ತಹಶೀಲ್ದಾರ್ ಮಾನ್ವಿ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಕುರಿತು.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ ಇವರ ಪತ್ರಸಂಖ್ಯೆ: ಕಂಇರಾ/ಸಿಬ್ಬಂದಿ/2009–10 ದಿನಾಂಕ:7.12.2009.

**ಪ್ರಸ್ತಾವನೆ:**

ಶ್ರೀ ಎಂ.ಎ. ಹಾಜಿಬಾಯಿ, ಮಾನ್ವಿ ತಾಲ್ಲೂಕು, ರಾಯಚೂರು ಜಿಲ್ಲೆ ತಹಶೀಲ್ದಾರ್‌ರಾಗಿ ದಿನಾಂಕ:21–11–2008ರಿಂದ ಕಾರ್ಯನಿರ್ವಹಿಸುತ್ತಿದ್ದು ಅವರ ಅವ್ಯವಹಾರಗಳ ಕುರಿತು ಸಲ್ಲಿಸಲಾದ ಮನವಿ ಪತ್ರಗಳ ಪ್ರತಿಗಳನ್ನು ಲಗತ್ತಿಸಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿರುತ್ತಾರೆ. ಜಿಲ್ಲಾಧಿಕಾರಿಗಳು ಲಗತ್ತಿಸಿರುವ ಮನವಿ ಪತ್ರಗಳು ಈ ಕೆಳಕಂಡಂತೆ ಇರುತ್ತವೆ.

1. ದಲಿತ ಸಂಘರ್ಷ ಸಮಿತಿ, ತಾಲ್ಲೂಕು ಸಮಿತಿ ರಾಯಚೂರು ಇವರ ಮನವಿ
2. ಅಡವಿ ಖಾನಾಪುರ ಗ್ರಾಮದ ನಿವಾಸಿಗಳ ಮನವಿ
3. ಶ್ರೀ ಬಸವನಗೌಡ ಬ್ಯಾಗವಾಟ, ಅಧ್ಯಕ್ಷರು ಕಾಡಾ–ಟಿಬಿಪಿ ಹಾಗೂ ಮಾಜಿ ಶಾಸಕರು ಮಾನ್ವಿ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರ ತುಂಗಭದ್ರಾ ಯೋಜನೆ ಇವರ ಮನವಿ.
4. ಬಹುಜನ ಸಮಾಜ ಪಕ್ಷ ರಾಯಚೂರು ಜಿಲ್ಲೆ ಇವರ ಮನವಿ
5. ಶ್ರೀ ಪ್ರತಾಪಗೌಡ ಪಾಟೀಲ್, ವಿಧಾನ ಸಭಾ ಸದಸ್ಯರು ಮಸ್ಕಿ ಕ್ಷೇತ್ರ ರಾಯಚೂರು ಜಿಲ್ಲೆ ಇವರ ಮನವಿ.

ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ (ರಿ) ರಾಯಚೂರು ಇವರು ದಿನಾಂಕ: 25–11–2009ರಂದು ಜಿಲ್ಲಾಧಿಕಾರಿಗಳಿಗೆ ಮನವಿ ಪತ್ರ ಸಲ್ಲಿಸಿ ಮಾನ್ವಿ ತಾಲ್ಲೂಕಿನ ತಹಶೀಲ್ದಾರರು ಸುಳ್ಳು ಮಾಹಿತಿಯನ್ನು ಕೊಟ್ಟು ನಷ್ಟ ಪರಿಹಾರವನ್ನು ಇಂದು ನಾಳೆ ಕೊಡುತ್ತೇನೆಂದು ಹೀಗೆ ದಿನಗಳನ್ನು ಕಳೆಯುತ್ತಿದ್ದಾರೆ. ಅರ್ನಹಳ್ಳಿ ಗ್ರಾಮದಲ್ಲಿ 350 ಚೆಕ್ಕುಗಳನ್ನು ಬರೆಸಿದ್ದು ಆದರೆ ತಹಶೀಲ್ದಾರರು 250 ಚೆಕ್ಕುಗಳನ್ನು ಮಾತ್ರ ನೀಡಿರುತ್ತಾರೆ. ಇನ್ನುಳಿದ 100 ಚೆಕ್ಕುಗಳನ್ನು ಕೈಬಿಟ್ಟಿರುತ್ತಾರೆ. ಆದುದರಿಂದ ಎಲ್ಲಾ ಸಂತ್ರಸ್ಥರಿಗೆ ಸರಿಯಾದ ರೀತಿಯಲ್ಲಿ ಚೆಕ್ಕು ವಿತರಣೆ ಮಾಡಬೇಕೆಂದು ಕೋರಿರುತ್ತಾರೆ. ಅರ್ನಹಳ್ಳಿ ಗ್ರಾಮದಲ್ಲಿ ಸುಮಾರು 120ಕ್ಕಿಂತ ಹೆಚ್ಚು ಮನೆಗಳು ನೆರೆಯಲ್ಲಿ ಮುಳುಗಿದ್ದ ಮನೆಗಳನ್ನು ಡ್ಯಾಮೇಜ್ ಎಂದು ತೋರಿಸಿರುತ್ತಾರೆ. ಆದರೆ ಇಲ್ಲಿ ಎಲ್ಲಾ ಮನೆಗಳು ಸಂಪೂರ್ಣವಾಗಿ ಬಿದ್ದು ಮನೆಯ ಸಾಮಗ್ರಿಗಳು ಕೊಚ್ಚಿಕೊಂಡು ಹೋಗಿರುತ್ತವೆ. ಆದುದರಿಂದ ಪುನಃ ಸಮೀಕ್ಷೆ ಮಾಡಿ ಸರಿಯಾದ ರೀತಿಯಲ್ಲಿ 350 ಜನರಿಗೆ ಸೂಕ್ತ ಪರಿಹಾರ ತಲುಪುವ ವ್ಯವಸ್ಥೆ ಮಾಡಬೇಕೆಂದು ಹಾಗೂ ರಾಯಚೂರು ಜಿಲ್ಲೆಯಲ್ಲಿ ನೆರೆ ಹಾವಳಿಯಲ್ಲಿ ತಹಶೀಲ್ದಾರರು, ಕಂದಾಯ ಅಧಿಕಾರಿಗಳು ಹಾಗೂ ಗ್ರಾಮ ಲೆಕ್ಕಿಗರ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಕೋರಿರುತ್ತಾರೆ.

ಶ್ರೀ ಎಂ.ಅನಿಲ್‌ಕುಮಾರ್, ಪ್ರಧಾನ ಕಾರ್ಯದರ್ಶಿಗಳು ಮಾನ್ವಿ ತಾಲ್ಲೂಕು ಬಿ.ಜೆ.ಪಿ ಇವರು ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿ ಮಾನ್ವಿ ತಾಲ್ಲೂಕಿನ ಅಧಿಕಾರಿಗಳು ಪರಿಹಾರ ಹಂಚಿಕೆಯಲ್ಲಿ ವಿಳಂಬ ನೀತಿ, ಭ್ರಷ್ಟಾಚಾರ ಎಸಗಿರುವ. ಸೂಕ್ತ ಸಂತ್ರಸ್ಥರನ್ನು ಗುರುತಿಸುವಲ್ಲಿ ವಿಫಲರಾಗಿ ಅನ್ಯಾಯ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿದ್ದಾರೆ. ಇದು ಅಲ್ಲದೆ ಈ ಹಿಂದೆ ಇವರು ವಿಶೇಷ ತಹಶೀಲ್ದಾರ್, ಯಡ್ರಾಮಿ, ಜೇವರ್ಗಿ ತಾಲ್ಲೂಕು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಇವರು ಚುನಾವಣೆಯಂತಹ ಮಹತ್ವದ ಕೆಲಸಗಳನ್ನು ನಿರ್ವಹಿಸುವಲ್ಲಿ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ತೋರಿಸಿದ್ದಕ್ಕಾಗಿ ಅವರನ್ನು ದಿನಾಂಕ: 12–05–2008ರಲ್ಲಿ ಜಿಲ್ಲಾಧಿಕಾರಿಗಳು ಗುಲ್ಬರ್ಗ ಜಿಲ್ಲೆ ಇವರು ಅಮಾನತ್ತುಗೊಳಿಸಿರುವುದು ಸಹ ಇವರ ಕರ್ತವ್ಯಲೋಪಕ್ಕೆ ಸಾಕ್ಷಿಯಾಗಿರುತ್ತದೆ. ಇವರು ತಾಲ್ಲೂಕು ತಹಶೀಲ್ದಾರ್‌ಗಾಗಿ ಕಾರ್ಯನಿರ್ವಹಿಸಲು ಅಸಮರ್ಥತೆ, ನಿರ್ಲಕ್ಷತನ, ಬೇಜವಾಬ್ದಾರಿತನ, ಸರ್ಕಾರದ ಹಣ ದುರುಪಯೋಗದಂತಹ ಆಪಾದನೆಗಳನ್ನು ಎಸಗಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮಕೈಗೊಳ್ಳುವುದು ಅನಿವಾರ್ಯವಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಕಂಇ 35 ಎಡಿಇ 2009, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಡಿ) ಮತ್ತು 10(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಎ. ಹಾಜಿಬಾಯಿ, ತಹಶೀಲ್ದಾರ್ ಮಾನ್ವಿ ತಾಲ್ಲೂಕು, ರಾಯಚೂರು ಜಿಲ್ಲೆ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಅಮಾನತ್ತಿನಲ್ಲಿರಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ ಇವರ ಅನುಮತಿ ಪಡೆಯದೇ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2816

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು–3)

**ವಿಷಯ:** ಶ್ರೀ ಆರ್.ಕೆ. ಬೋರ್ಕರ್, ಹಿಂದಿನ ತಹಶೀಲ್ದಾರ್, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 18ರಡಿಯಲ್ಲಿ ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿರುವ ಮೇಲ್ಮನವಿ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ: ಆರ್‌ಡಿ 7 ಎಡಿಇ 2002, ದಿನಾಂಕ: 25–08–2006.

2) ಶ್ರೀ ಆರ್.ಕೆ. ಬೋರ್ಕರ್, ಹಿಂದಿನ ತಹಶೀಲ್ದಾರ್ ಇವರು ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಿರುವ ಮೇಲ್ಮನವಿ ದಿನಾಂಕ: 05–12–2006.

**ಪ್ರಸ್ತಾವನೆ:**

ಶ್ರೀ ಆರ್.ಕೆ. ಬೋರ್ಕರ್, ಹಿಂದಿನ ತಹಶೀಲ್ದಾರ್, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 18(2)(ಬಿ)ರಡಿಯಲ್ಲಿ ಸರ್ಕಾರದ ಆದೇಶ ಸಂ: ಆರ್‌ಡಿ 7 ಎಡಿಇ 2002, ದಿನಾಂಕ: 25–08–2006ರ ವಿರುದ್ಧ ಗೌರವಾನ್ವಿತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿರುತ್ತಾರೆ. ಮೇಲ್ಮನವಿ ಪ್ರಕರಣದ ವಿವರಗಳು ಈ ಕೆಳಕಂಡಂತೆ ಇದೆ.

ಶ್ರೀ ಆರ್.ಕೆ. ಬೋರ್ಕರ್, ಹಿಂದಿನ ತಹಶೀಲ್ದಾರ್ ತರೀಕೆರೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಕರ್ತವ್ಯ ಲೋಪ ದುರ್ನಡತೆ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಈ ಕೆಳಕಂಡ ಆರೋಪಗಳನ್ನು ಮಾಡಲಾಗಿದೆ.

ಶ್ರೀ ಆರ್.ಕೆ. ಬೋರ್ಕರ್, ಹಿಂದಿನ ತಹಶೀಲ್ದಾರ್, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಹಾಲಿ ನಿವೃತ್ತರು ಇವರು ಸದರಿ ತಾಲ್ಲೂಕಿನ ಅಮೃತಪುರ ಹೋಬಳಿ ಲಕ್ಕೇನಹಳ್ಳಿ ಗ್ರಾಮದ ಸ.ನಂ.3ರಲ್ಲಿ ಹಾದಿಕೆರೆ ಪಶ್ಚಿಮ ಮನ್ನಾ ಜಂಗ್ಲಿಗೆ ಸೇರಿದ 314–32 ಎಕರೆ ಜಾಗದಲ್ಲಿ ಅರಣ್ಯ ಇಲಾಖೆಗೆ ಸೇರಿದ 240–00 ಎಕರೆ ಹಾಗೂ ಕಂದಾಯ ಇಲಾಖೆಯದೆಂದು ಹೇಳಲಾದ 74–32ಎಕರೆ ಜಾಗ ಗುರುತಿಸದೇ ಕಂದಾಯ ಇಲಾಖೆಯ ವಶಕ್ಕೆ ಪಡೆಯದೇ ಇರುವ ಪ್ರದೇಶದಲ್ಲಿ ಶ್ರೀ ತಮ್ಮಣ್ಣ ಬಿನ್ ರಂಗಪ್ಪ ಮತ್ತು ಇತರ 11 ಜನರಿಗೆ ತಲಾ 4–38 ಎಕರೆಯಂತೆ ದರಖಾಸ್ತು ಮಂಜೂರಾತಿ ಕೋರಿ 1990 ರಲ್ಲಿ ಸಲ್ಲಿಸಿದ್ದ ಅರ್ಜಿಗಳ ಆಧಾರದ ಮೇಲೆ ಮಂಜೂರಾತಿಗೆ ಅವಕಾಶವಿಲ್ಲದಿದ್ದರೂ ಅರಣ್ಯ ಇಲಾಖೆಯ ಒಪ್ಪಿಗೆಯನ್ನು ಪಡೆಯದೇ ಭೂ ಮಂಜೂರಾತಿ ನಿಯಮಗಳ ನಿಯಮ 3,4,5 ಮತ್ತು 6ನ್ನು ಪಾಲಿಸದೇ ನಿಯಮ ಬಾಹಿರವಾಗಿ ಜಮೀನನ್ನು ಮಂಜೂರು ಮಾಡಿದ್ದು, ಈ ಪೈಕಿ 4 ಜನ ಅರ್ಜಿದಾರರು ಮೃತರಾಗಿದ್ದು, ಮೃತ ಹೆಸರಿನಲ್ಲಿ ಬೇರೆಯವರ ಸಹಿ ಪಡೆದು ಅವರ ಹೆಸರಿನ ಸಾಗುವಳಿ ಚೀಟಿ ವಿತರಿಸಿರುವುದು ಹಾಗೂ ಅರಣ್ಯ ಸಂರಕ್ಷಣಾ ಕಾಯ್ದೆ 1980ರ ಸೆಕ್ಷನ್ 2ನ್ನು ಹಾಗೂ ಸರ್ವೋಚ್ಛ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿ ಕರ್ತವ್ಯ ಲೋಪ ಎಸಗಿರುವುದು.

ಅದರಂತೆ ಸರ್ಕಾರದ ಆದೇಶ ಸಂ: ಆರ್‌ಡಿ 7 ಎಡಿಎ 2002, ದಿನಾಂಕ: 12–07–04ರ ಆದೇಶದಲ್ಲಿ ಶ್ರೀ ಆರ್.ಕೆ. ಬೋರ್ಕರ್ ಮೇಲೆ ಇಲಾಖಾ ವಿಚಾರಣೆ ನಡೆಸಲು ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ವಿಚಾರಣಾ ವರದಿಯಲ್ಲಿ ಆರೋಪಿತರ ವಿರುದ್ಧ ಆರೋಪಗಳು ಸಾಬೀತಾಗಿರುತ್ತದೆ ಎಂದು ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಿ ಆರೋಪಿತರ ಕರ್ತವ್ಯ ಚ್ಯುತಿ ಎಸಗಿರುವುದು ಸಾಬೀತಾಗಿರುವ ಹಿನ್ನೆಲೆಯಲ್ಲಿ ಸದರಿಯವರ ನಿವೃತ್ತಿ ವೇತನದಿಂದ ಶೇಕಡ 50ರಷ್ಟು ನಿವೃತ್ತಿ ವೇತನವನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಿ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ: 25–08–2006ರಲ್ಲಿ ಆದೇಶಿಸಲಾಗಿತ್ತು.

ಸರ್ಕಾರದ ಈ ಆದೇಶದ ವಿರುದ್ಧ ನಿವೃತ್ತ ಆರೋಪಿತ ಅಧಿಕಾರಿ ಕೆ.ಸಿ.ಎಸ್.ಆರ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 18ರಡಿಯಲ್ಲಿ ಗೌರವಾನ್ವಿತ ರಾಜ್ಯಪಾಲರಿಗೆ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 05–12–2006 ರಂದು ಮೇಲ್ಮನವಿ, ಸಲ್ಲಿಸಿ, ಸರ್ಕಾರವು ಅವರಿಗೆ ವಿಧಿಸಿರುವ ದಂಡನಾದೇಶವನ್ನು ರದ್ದುಗೊಳಿಸಿ, ಅವರ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ.

ಮೇಲ್ಮನವಿಯಲ್ಲಿ ಎತ್ತಿರುವ ಅಂಶಗಳನ್ನು ಸರ್ಕಾರವು ಮರುಪರಿಶೀಲಿಸಿ, ಆಪಾದಿತ ನಿವೃತ್ತ ಅಧಿಕಾರಿಯು ಅಕ್ರಮವಾಗಿ ಮಂಜೂರು ಮಾಡಿದ ಜಮೀನನ್ನು ಸಹಾಯಕ ಆಯುಕ್ತರು ರದ್ದುಗೊಳಿಸಿದ್ದರಿಂದ, ಜಮೀನು ಸರ್ಕಾರದ

ವಶದಲ್ಲಿರುವುದನ್ನು ಪರಿಗಣಿಸಿ, ಆಪಾದಿತರ ನಿವೃತ್ತಿ ವೇತನದಲ್ಲಿ 50% ರಷ್ಟು ಕಡಿತಗೊಳಿಸಿರುವುದನ್ನು ಕಡಿಮೆ ಮಾಡಿ, ಶೇಕಡ 25% ರಷ್ಟಕ್ಕೆ ಕಡಿತಗೊಳಿಸಲು ಘನತೆವೆತ್ತ ರಾಜ್ಯಪಾಲರಿಗೆ ಶಿಫಾರಸ್ಸು ಮಾಡಲಾಗಿತ್ತು. ಘನತೆವೆತ್ತ ರಾಜ್ಯಪಾಲರು ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

I have Considered the appeal petition Submitted under rule 18 of KCS (CC&A) Rules 1957 by Sri R.K. Borker, Retired Tahsildar against the Government Order No. RD 07 ADE 2002 dt: 25th August 2006 imposing the penalty of reduction of 50% of pension permanently, in the light of the contentions raised in the appeal petition and also perused the connected enquiry and appeal records.

Apparently the charge of granting Government lands to twelve persons including four deceased persons, without demarcation as forest and revenue lands and issuing saguvali chits has been proved in the enquiry.

However, in view of the fact that the land said to have been granted illegally has been regained by Government and no financial impropriety is imputed on the AGO, much less proved, I concur with the recommendation of the Government and modify the penalty to that of withholding 25% of the pension permanently.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 05 ಎಡಿಇ 2007, ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಆರ್.ಕೆ. ಬೋರ್ಕರ್, ನಿವೃತ್ತ ತಹಶೀಲ್ದಾರ್, ಇವರಿಗೆ ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 7 ಎಡಿಇ 2002, ದಿನಾಂಕ: 25–8–2006ರ ಆದೇಶದಲ್ಲಿ ನಿವೃತ್ತಿ ವೇತನದಲ್ಲಿ ಶೇ. 50/– ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಿದ ಆದೇಶವನ್ನು ಮಾರ್ಪಡಿಸಿ ಶೇ. 25/– ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2817

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು–3)

**ವಿಷಯ:** ಕಾರ್ಕಳ ತಾಲ್ಲೂಕು, ಹೆಬ್ರಿ ಗ್ರಾಮದ ಸ,ನಂ: 214/1ರಲ್ಲಿ ರಿಸರ್ವ್ ಫಾರೆಸ್ಟ್ ಜಮೀನನ್ನು ಅಕ್ರಮವಾಗಿ ಮಂಜೂರು ಮಾಡಿದ ಅಧಿಕಾರಿ/ಸಿಬ್ಬಂದಿ ವಿರುದ್ಧ ಶಿಸ್ತು ಕ್ರಮ ಕುರಿತು ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಉಡುಪಿ ಜಿಲ್ಲಾಧಿಕಾರಿಗಳ ಪತ್ರ ಸಂ: ಇಎಸ್‌ಟಿ (1): ಸಿಆರ್: 4: 2004–05, ದಿನಾಂಕ: 26–08–2005.

2) ಶ್ರೀ ಶಾಂತಾರಾಂ ಚಿಪಳೂಣ್‌ಕರ್, ಹಿಂದಿನ ತಹಶೀಲ್ದಾರ್ ಮತ್ತಿತರಿಗೆ ನೀಡಿರುವ ಕಾರಣ ಕೇಳುವ ನೋಟಿಸ್ ಸಂ: ಕಂಇ: 7: ಎಡಿಇ:2005, ದಿನಾಂಕ: 20–12–2005.

3) ಅಧಿಕಾರಿ/ನೌಕರರು ನೀಡಿರುವ ಲಿಖಿತ ಹೇಳಿಕೆ :

ಅ) ಶ್ರೀ ಶಾಂತಾರಾವ್, ಚಿಪಳೂಣ್‌ಕರ್, ತಹಶೀಲ್ದಾರ್ ದಿನಾಂಕ: 11–01–2006.

ಆ) ಶ್ರೀ ಸದಾಶಿವ ಕಲ್ಯಾಣಪುರ, ಉಪತಹಶೀಲ್ದಾರ್, ದಿನಾಂಕ: 10–02–2006.

ಇ) ಶ್ರೀ ಕೆ. ಭಾಸ್ಕರ್ ಪ್ರ.ದ.ಸ. ದಿನಾಂಕ: 10–02–2006.

4) ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2004, ಬೆಂಗಳೂರು ದಿನಾಂಕ: 06–10–2006.

5) ಸರ್ಕಾರದ ತಿದ್ದೋಲೆ ದಿನಾಂಕ: 10–11–2006.

6) ಸರ್ಕಾರದ ಆದೇಶ ಸಂ: ಆರ್‌ಡಿ 07 ಎಡಿಇ 2005, ದಿನಾಂಕ: 10–04–2007.

7) ವಿಚಾರಣಾಧಿಕಾರಿಗಳ ವರದಿ ದಿನಾಂಕ: 27–09–2007.

8) ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ: 03–03–2008.

9) ಲಿಖಿತ ಸಮಜಾಯಿಷಿ:

1) ಶ್ರೀ ಕೆ.ಭಾಸ್ಕರ್, ಹಿಂದಿನ ದ್ವಿತೀಯ ದರ್ಜೆ ಸಹಾಯಕರು, ದಿನಾಂಕ: 24–04–2008.

2) ಶ್ರೀ ಶಾಂತರಾಮ ಚಿಪಳೂಣಕರ್, ನಿವೃತ್ತ ತಹಶೀಲ್ದಾರ್, ದಿನಾಂಕ: 15–05–2008.

3) ಶ್ರೀ ಸದಾಶಿವ ಕಲ್ಯಾಣಪುರ, ನಿವೃತ್ತ ಶಿರಸ್ತೇದಾರ್, ದಿನಾಂಕ: 12–11–2008.

10) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂ: ಪಿಎಸ್‌ಸಿ 64 ಸಿಎನ್‌ಎಸ್ 09, ದಿನಾಂಕ: 21–07–2009.

**ಪ್ರಸ್ತಾವನೆ:**

ಕಾರ್ಕಳ ತಾಲ್ಲೂಕು ಹೆಬ್ರಿ ಗ್ರಾಮದ ಸ.ನಂಬ್ರ:214:1 ರಲ್ಲಿನ ಅರಣ್ಯ ಜಮೀನು ಅಕ್ರಮ ಸಕ್ರಮದಡಿ ಕಾನೂನು ಬಾಹಿರವಾಗಿ ಮಂಜೂರು ಮಾಡಿರುವ ಸಂಬಂಧ ಹಿಂದಿನ ತಹಶೀಲ್ದಾರರಾದ ಶ್ರೀ ಶಾಂತಾರಾವ್ ಚಿಪಳೂಣ್‌ಕರ್ ಮತ್ತಿತರ ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಇವರುಗಳ ವಿರುದ್ಧ ಕರಡು ದೋಷಾರೋಪಗಳನ್ನು ತಯಾರಿಸಿ ಮೇಲೆ ಕ್ರ.ಸಂ(1)ರಲ್ಲಿ ಓದಲಾದ ದಿ: 26–08–2005ರ ಪತ್ರದಲ್ಲಿ ಉಡುಪಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13ರಡಿಯಲ್ಲಿ ದೋಷಾರೋಪಗಳನ್ನು (ಅನುಬಂಧ 1 ರಿಂದ 4ರ ವರೆಗೆ) ಆರೋಪಿತ ಅಧಿಕಾರಿ: ನೌಕರರುಗಳಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 20–12–2005ರ ಕಾರಣ ಕೇಳುವ ನೋಟೀಸು ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು.

ಆಪಾದಿತ ಅಧಿಕಾರಿ: ನೌಕರರಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಹೇಳಲಾಗಿರುವ ಅಧಿಕಾರಿ: ನೌಕರರು ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಲಾಗುವುದು ಸೂಕ್ತವೆಂದು ಭಾವಿಸಿ ಮೇಲೆ ಓದಲಾದ ಕ್ರ.ಸಂ (4) ದಿನಾಂಕ: 06–10–2006ರಲ್ಲಿ ಶ್ರೀ ಬಿ. ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಕ್ಷಿಣ ಕನ್ನಡ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸದರಿ ಸರ್ಕಾರಿ ಆದೇಶದಲ್ಲಿ ಆದೇಶ ಸಂಖ್ಯೆ ತಪ್ಪಾಗಿದ್ದರಿಂದ ಮೇಲೆ ಓದಲಾದ ಕ್ರ.ಸಂ (5) ದಿನಾಂಕ: 10–11–2006ರಲ್ಲಿ ತಿದ್ದೋಲೆಯನ್ನು ಹೊರಡಿಸಲಾಗಿರುತ್ತದೆ. ನಂತರ ವಿಚಾರಣಾಧಿಕಾರಿಗಳಾದ ಶ್ರೀ ಬಿ. ಶಂಕರನಾರಾಯಣ ಭಟ್, ಇವರು ತಮಗೆ ಆರೋಗ್ಯ ಸರಿಯಿಲ್ಲದ ಕಾರಣ ಇಲಾಖಾ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿದ್ದರಿಂದ ಮೇಲೆ ಓದಲಾದ ಕ್ರ.ಸಂ. (6) ದಿನಾಂಕ: 10–04–2007ರಲ್ಲಿ ಶ್ರೀ ಬಿ. ಶಂಕರನಾರಾಯಣ ಭಟ್ ಇವರ ಬದಲಾಗಿ ಶ್ರೀ ಎನ್. ಸುಬ್ಬರಾವ್, ನಿವೃತ್ತ ಜಿಲ್ಲಾ ಸತ್ರ ನ್ಯಾಯಾಧೀಶರು ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿರುತ್ತದೆ. ಅದರಂತೆ ವಿಚಾರಣಾಧಿಕಾರಿಗಳು ದಿನಾಂಕ: 27–09–2007ರಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿ, ಸದರಿ ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿ/ನೌಕರರ ವಿರುದ್ಧ ಆರೋಪಗಳ ಕುರಿತು ನಿರ್ಣಯಿಸಿರುತ್ತಾರೆ.

1. ಆರೋಪ–1: ರುಜುವಾತು ಆಗಿಲ್ಲ.
2. ಆರೋಪ–2: ರುಜುವಾತು ಆಗಿದೆ.
3. ಆರೋಪ–3: ರುಜುವಾತು ಆಗಿದೆ.
4. ಆರೋಪ–4: ಭಾಗಶಃ ರುಜುವಾತಾಗಿದೆ.

ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿ/ನೌಕರರ ವಿರುದ್ಧ ಆರೋಪಗಳ ಕುರಿತು ತಹಶೀಲ್ದಾರರಂತಹ ಜವಾಬ್ದಾರಿಯುತ ಅಧಿಕಾರಿ/ಆ ಕಡತವನ್ನಾಗಲೀ, ಟಿಪ್ಪಣಿಯಲ್ಲಿ ಹೇಳಿದಂತಹ ಜಿಲ್ಲಾಧಿಕಾರಿಗಳ ಆದೇಶವನ್ನಾಗಲೀ ಪರಿಶೀಲಿಸದೆ ಹೇಗೆ ಅನುಮತಿ ಕೊಟ್ಟರು, ಅದು ಕರ್ತವ್ಯ ನಿರ್ಲಕ್ಷ್ಯವೇ ಅಥವಾ ಉದ್ದೇಶಪೂರ್ವಕವಾಗಿ ಆದುದೇ? ಹೀಗೆ ಸುಳ್ಳು ಷರಾ ಬರೆದು ನಿಯಮಗಳನ್ನು ನಿರ್ಲಕ್ಷಿಸಿ, ಅಕ್ರಮ ಸಕ್ರಮ ಸಮಿತಿಯನ್ನು ದಾರಿ ತಪ್ಪಿಸಿ ಅರ್ಜಿದಾರರಿಗೆ ಅನುಕೂಲವಾಗುವಂತಹ ಆದೇಶ ಪಡೆದು ಆಪಾದಿತರು ಕರ್ತವ್ಯ ನಿಷ್ಠೆ ಇಲ್ಲದಿರುವುದನ್ನು ತೋರ್ಪಡಿಸಿರುತ್ತಾರೆಂದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಇಲ್ಲದ ಆದೇಶ ಪ್ರಸ್ತಾಪ ಮಾಡಿ ಸುಳ್ಳು ಟಿಪ್ಪಣಿ ಬರೆದಿದ್ದು, ಈ ಸಂದರ್ಭದಲ್ಲಿ ಆಪಾದಿತರು ನೀಡುವ ಯಾವುದೇ ವಿವರಣೆಗಳು ನಂಬಲು ಸಾಧ್ಯವಿಲ್ಲ. ಅದು ದುರುದ್ದೇಶದಿಂದ ಮಾಡಿದ ಅಕೃತ್ಯ. ರಕ್ಷಿತ ಅರಣ್ಯದಲ್ಲಿ ಜಮೀನು ಮಂಜೂರು ಮಾಡಬೇಕಾಗುತ್ತದೆ ಎಂದು ಅವರಿಗೆ ತಿಳಿದಿತ್ತು. ಅರಣ್ಯ ಗಡಿ ಗುರ್ತಿಸಲು ದಾಖಲೆಗಳು ಇಲ್ಲವೆಂದಿದ್ದಾರೆ. ಗಡಿ ಗುರ್ತಿಸಲು ಸಾಧ್ಯವಾಗದಿದ್ದಲ್ಲಿ, ಅರಣ್ಯ ಇಲಾಖೆಗೆ ತಿಳಿಸಿ, ಅವರ ಮುಂದೆ ಕಾನೂನು ಪ್ರಕಾರ ಅಳತೆ ಮಾಡಿಸಿ, ಗಡಿ ನಿರ್ಣಯಿಸಬೇಕಿತ್ತು. ಕನಿಷ್ಠವೆಂದರೆ ಆ ರೀತಿ ಟಿಪ್ಪಣಿಯನ್ನಾದರೂ ಬರೆಯಬೇಕಿತ್ತು. ಈಗ ತಮ್ಮ ಅಕೃತ್ಯವನ್ನು ಮುಚ್ಚಿಟ್ಟುಕೊಳ್ಳಲು, ಗಡಿ ಬಗ್ಗೆ ದಾಖಲೆಗಳಿಲ್ಲ ಎಂದು ಇನ್ನೊಂದು ಸುಳ್ಳು ಹೇಳಲಾಗಿದೆ. ಕಂದಾಯ ದಾಖಲೆ ಪ್ರಕಾರ ಎಷ್ಟು ಎಕರೆ ರಿಜರ್ವ್ ಫಾರೆಸ್ಟ್ ಅಂತ ಸ್ಪಷ್ಟವಾಗಿ ನಮೂದಿಸಲಾಗಿದೆ. ಅರಣ್ಯಾಧಿಕಾರಿಗಳಿಗೆ ಬರೆದ ಪತ್ರವನ್ನು ಕಳಿಸದೇ ಇರುವುದೂ, ಉದ್ದೇಶಪೂರ್ವಕವಾಗಿ ನಡೆಸಿದ ಒಳಸಂಚೆಂದು ತೀರ್ಮಾನಿಸಬಹುದಾಗಿದೆ. ಹೆಕ್ಟೇರಿಗೆ 25ಕ್ಕಿಂತ ಹೆಚ್ಚಿನ ಮರಗಳಿದ್ದರೂ ಸ್ಥಳ ಮಂಜೂರು ಮಾಡಲು ಶಿಫಾರಸ್ಸು ಮಾಡುತ್ತಿದ್ದೀರಿ, ಪತ್ರದಲ್ಲಿ ಹೇಳಿರುವ ವಿಷಯವನ್ನು ಗಮನದಲ್ಲಿಟ್ಟುಕೊಂಡು ನಿಖರ ಅಭಿಪ್ರಾಯ ತಿಳಿಸಿ ಅಂತ ಅರಣ್ಯ ಸಂರಕ್ಷಣಾಧಿಕಾರಿಗಳು ತಮ್ಮ ತಮ್ಮ ವಲಯ ಅರಣ್ಯ ಅಧಿಕಾರಿಗಳಿಗೆ ಸೂಚನೆ ನೀಡಿದ್ದಾರೆ.

ಅದರಲ್ಲಿ ತಿಳಿಸಿದ್ದಕ್ಕಿಂತ ಕಡಿಮೆ ಮರಗಳಿದ್ದಲ್ಲಿ ತಾಲ್ಲೂಕು ಕಛೇರಿಯವರು ತಮಗೆ ತಿಳಿಸದೇ ಮುಂದುವರಿಯಬಹುದೆಂಬ ಅರ್ಥವಲ್ಲ, ಅಲ್ಲದೆ ಆಪಾದಿತರ ಪ್ರಕಾರ ಅದು ಕಂದಾಯ ಜಮೀನಿಗೆ ಸಂಬಂಧಿಸಿದ್ದು, ಕಾಯ್ದಿರಿಸಿದ ಅರಣ್ಯ ಜಮೀನು ಬಗ್ಗೆ ಅಲ್ಲ. ಸರಿಯಾದ ಡಿಮಾರ್ಕೇಷನ್ ಇಲ್ಲದಿರುವಾಗ ಅದು ಅರಣ್ಯ ಜಮೀನು ಅಲ್ಲ, ಕಂದಾಯ ಜಮೀನು ಎನ್ನುವ ನಿರ್ಣಯಕ್ಕೆ ಆಪಾದಿತರು ಹೇಗೆ ಬಂದರು? ಜಿಲ್ಲಾಧಿಕಾರಿಯವರ ನ್ಯಾಯಾಲಯದಲ್ಲಿ ಅಪೀಲು ಇರುವುದು ಮಂಜೂರಾತಿ ಬಗ್ಗೆ ಮಾತ್ರ, ಇಲ್ಲಿ ಇರುವುದು ಸುಳ್ಳು ಟಿಪ್ಪಣಿ ಹಾಕಿ, ತಪ್ಪು ಮಾಹಿತಿ ನೀಡಿ ಆದೇಶ ಪಡೆದುಕೊಂಡದಾಗಿರುತ್ತದೆ ಎಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ.

ಆರೋಪಗಳು ಸಾಬೀತಾಗಿದ್ದರಿಂದ ಸದರಿಯವರುಗಳಿಗೆ ಮೇಲೆ ಓದಲಾದ ಕ್ರ.ಸಂ. (8)ರ ದಿನಾಂಕ: 03–03–2008ರಲ್ಲಿ ವಿಚಾರಣಾ ವರದಿಯೊಂದಿಗೆ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ. ಅದರಂತೆ, ಅಧಿಕಾರಿ/ನೌಕರರ ತಮ್ಮಗಳ ಲಿಖಿತ ಸಮಜಾಯಿಷಿಗಳನ್ನು ಸಲ್ಲಿಸಿ, ತಮ್ಮಗಳ ವಿರುದ್ಧದ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ. ಇಲಾಖಾ ವಿಚಾರಣೆಯಲ್ಲಿ ಆಪಾದನೆಗಳು ಸಾಕ್ಷಿ ಹಾಗೂ ದಾಖಲೆಗಳ ಸಮೇತ ಸಾಬೀತಾಗಿರುವುದರಿಂದ, ಆರೋಪಿತ ಅಧಿಕಾರಿ/ನೌಕರರ ಲಿಖಿತ ಸಮಜಾಯಿಷಿಗಳು ಒಪ್ಪಲು ಸಾಧ್ಯವಾಗುವುದಿಲ್ಲವಾದ್ದರಿಂದ ಶ್ರೀ ಶಾಚಿತಾರಾಮ್ ಚಿಪಳೂಣ್‌ಕರ್, ನಿವೃತ್ತ ತಹಶೀಲ್ದಾರ್, ಶ್ರೀ ಸದಾಶಿವ ಕಲ್ಯಾಣಪುರ, ನಿವೃತ್ತ ಉಪತಹಶೀಲ್ದಾರ್ ಹಾಗೂ ಶ್ರೀ ಕೆ. ಭಾಸ್ಕರ್, ಹಿಂದಿನ ದ್ವಿ.ದ.ಸ, ಪ್ರಸ್ತುತ ಸೇವೆಯಲ್ಲಿದ್ದು, ಇವರುಗಳ ವಿರುದ್ಧ ದಂಡನೆ ವಿಧಿಸಲು ನಿರ್ಧರಿಸಿ, ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಅದರಂತೆ, ಮೇಲೆ ಓದಲಾದ ಕ್ರ.ಸಂ. (10) ದಿನಾಂಕ: 21–07–2009ರಲ್ಲಿ ಆಯೋಗವು ಸರ್ಕಾರವು ಉದ್ದೇಶಿಸಿರುವ ದಂಡನೆಗೆ ಸಹಮತಿಯನ್ನು ನೀಡಿರುವ್ಯದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 07 ಎಡಿಇ 2005, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಒಪ್ಪಿ, ಈ ಪ್ರಕರಣದಲ್ಲಿ ಭಾಗಿಯಾಗಿರುವ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಆರೋಪಗಳು ಸಾಬೀತಾಗಿದ್ದರಿಂದ ಅವರುಗಳಿಗೆ ದಂಡನೆಯನ್ನು ವಿಧಿಸಿ ಆದೇಶಿಸಿದೆ.

1. ಶ್ರೀ ಶಾಚಿತಾರಾಮ್ ಚಿಪಳೂಣ್‌ಕರ್, ಹಿಂದಿನ ತಹಶೀಲ್ದಾರ್, ಕಾರ್ಕಳ ತಾಲ್ಲೂಕು, ಪ್ರಸ್ತುತ ನಿವೃತ್ತ ತಹಶೀಲ್ದಾರ್–ಇವರಿಗೆ ನಿವೃತ್ತಿ ವೇತನದಿಂದ ಶಾಶ್ವತವಾಗಿ ಶೇ. 25ರಷ್ಟನ್ನು ಕಡಿತಗೊಳಿಸುವ ದಂಡನೆ.
2. ಶ್ರೀ ಸದಾಶಿವ ಕಲ್ಯಾಣಪುರ, ಹಿಂದಿನ ಉಪತಹಶೀಲ್ದಾರ್ ಕಾರ್ಕಳ ತಾಲ್ಲೂಕು, ಕಛೇರಿ, ಪ್ರಸ್ತುತ ನಿವೃತ್ತ – ಇವರಿಗೆ ನಿವೃತ್ತಿ ವೇತನದಿಂದ ಶಾಶ್ವತವಾಗಿ ಶೇ. 25ರಷ್ಟನ್ನು ಕಡಿತಗೊಳಿಸುವ ದಂಡನೆ.
3. ಶ್ರೀ ಕೆ.ಭಾಸ್ಕರ್, ಹಿಂದಿನ ದ್ವಿ.ದ.ಸ. ಕಾರ್ಕಳ ತಾಲ್ಲೂಕು, ಕಛೇರಿ, ಪ್ರಸ್ತುತ ಸೇವೆಯಲ್ಲಿದ್ದು– ಇವರಿಗೆ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2818

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು–3)

**ವಿಷಯ:** ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್, ನಂಜನಗೂಡು, ಪ್ರಸ್ತುತ ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ಪ್ರಸ್ತಾವನೆ ದಿನಾಂಕ: 04–02–2006.
2) ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2005, ದಿನಾಂಕ: 05–09–2005
3) ಕಾರಣ ಕೇಳುವ ನೋಟೀಸ್ ದಿನಾಂಕ: 03–03–2006.
4) ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2005, ದಿನಾಂಕ: 22–04–2006.
5) ಶ್ರೀ ರುದ್ರೇಶ್ವರಯ್ಯ, ಇವರ ಲಿಖಿತ ಸಮಜಾಯಿಷಿ ದಿನಾಂಕ: 03–03–2006 (ದಿ:16–3–2006 ರಂದು ಸ್ವೀಕೃತವಾಗಿದೆ).
6) ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2005, ದಿನಾಂಕ: 09–02–2007.
7) ಶ್ರೀ ಎನ್. ಸುಬ್ಬರಾವ್ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ವಿಚಾರಣಾ ವರದಿ ದಿನಾಂಕ: 26–12–2007.
8) ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ: 23–01–08.
9) ಶ್ರೀ ರುದ್ರೇಶ್ವರಯ್ಯ, ನಿವೃತ್ತ ತಹಶೀಲ್ದಾರ್, ಇವರ ಲಿಖಿತ ಸಮಜಾಯಿಷಿ ದಿನಾಂಕ: 04–08–2008.
10) ಸರ್ಕಾರದ ಪತ್ರ ಸಂ: ಆರ್‌ಡಿ 44 ಎಡಿಇ 2005, ದಿನಾಂಕ: 02–02–2009.

11) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು ಇವರ ಪತ್ರ ಸಂ: ಪಿಎಸ್‌ಸಿ 211 ಸಿಎನ್‌ಎಸ್ 2008, ದಿನಾಂಕ: 13–05–2009.
12) ಸರ್ಕಾರದ ಪತ್ರ ಸಂ: ಆರ್‌ಡಿ 44 ಎಡಿಇ 2005, ದಿನಾಂಕ: 07–09–2009.
13) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು ಇವರ ಪತ್ರ ಸಂ: ಪಿಎಸ್‌ಸಿ 211 ಸಿಎನ್‌ಎಸ್ 08, ದಿನಾಂಕ: 20–10–2009.

**ಪ್ರಸ್ತಾವನೆ:**

ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ, ಇವರು ನಂಜನಗೂಡಿನಲ್ಲಿ ತಹಶೀಲ್ದಾರರಾಗಿ ಕರ್ತವ್ಯ ಸಲ್ಲಿಸುತ್ತಿದ್ದ ಅವಧಿಯಲ್ಲಿ (1)ಶ್ರೀ ವಿನೋದ್‌ಕುಮಾರ್ ಬಿನ್ ಕೆ. ವಸಂತಕುಮಾರ್ ಇವರಿಗೆ ಕೃಷಿ ಕಾರ್ಮಿಕರ ದೃಢೀಕರಣ ಪತ್ರವನ್ನು ನೀಡಿರುವ ಬಗ್ಗೆ (2) ಶ್ರೀ ಮಹದೇವಯ್ಯ ಬಿನ್ ಮಾದಯ್ಯ ಇವರಿಗೆ ಸಣ್ಣ ಹಿಡುವಳಿದಾರ ಪ್ರಮಾಣ ಪತ್ರ ನೀಡಿರುವ ಬಗ್ಗೆ, (3) ಶ್ರೀ ಹೆಚ್. ಪುಂಡಲೀಕರಾವ್ ಬಿನ್ ಚಿದಾನಂದರಾವ್ ಇವರಿಗೆ ಖಾತೆ ವರ್ಗಾವಣೆ ಮಾಡಲು ಆದೇಶ ನೀಡಿರುವ ಬಗ್ಗೆ. (4) ಚುನಾವಣಾ ಆಯೋಗವು ನೀಡಲಾಗಿದ್ದ ಮಾರ್ಗಸೂಚಿಗಳನ್ವಯ ಯಾವುದೇ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬಾರದೆಂದು ಕಟ್ಟುನಿಟ್ಟಾಗಿ ಆದೇಶಿಸಿದ್ದರೂ ಸಹ ಅಕ್ರಮ ಸಕ್ರಮ ಸಮಿತಿಯ ಸಭೆಯನ್ನು ಕರೆದು, ನಂಜನಗೂಡು ತಾಲ್ಲೂಕು, ಹರತಿಲೆ ಗ್ರಾಮದ ಸ.ನಂ: 179 ರಲ್ಲಿ 0–38 ಗುಂಟೆ ಜಮೀನನ್ನು ಶ್ರೀಮತಿ ಮಾದಮ್ಮ ಕೋಂ ಕಾಳೇಗೌಡ ಎಂಬುವವರಿಗೆ ಮಂಜೂರು ಮಾಡಲು ಕಾರಣರಾಗಿರುವ ಕುರಿತು ಕರ್ತವ್ಯ ಲೋಪ ಎಸಗುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1966ರ ನಿಯಮ 3(1) (i) (ii) (iii) ಅನ್ನು ಉಲ್ಲಂಘಿಸಿರುತ್ತಾರೆ. ಎಂಬ ಆರೋಪದ ಮೇಲೆ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ/ 1ರ ದಿನಾಂಕ: 4–2–2006ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಮೇಲೆ ಓದಲಾದ ಕ್ರ.ಸಂ 2ರ ದಿನಾಂಕ:5.9.2005ರ ಆದೇಶದಲ್ಲಿ ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್, ನಂಜನಗೂಡು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿರುತ್ತದೆ. ತದನಂತರ, ಸರ್ಕಾರವು ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ: 22–4–2006ರ ಆದೇಶದಲ್ಲಿ ಅಮಾನತ್ತಿನಿಂದ ಬಿಡುಗಡೆಗೊಳಿಸಲಾಗಿರುತ್ತದೆ. 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ದೋಷಾರೋಪಣೆಯನ್ನು (ಅನುಬಂಧ 1ರಿಂದ 4 ರವರೆಗೆ) ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್ ನಂಜನಗೂಡು ಇವರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ದಿ: 3–3–2006ರ ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (5) ರಲ್ಲಿ ಶ್ರೀ ರುದ್ರೇಶ್ವರಯ್ಯ, ಇವರು ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (6) ರಲ್ಲಿ ದಿನಾಂಕ: 09–02–2007ರ ಆದೇಶದಲ್ಲಿ ಶ್ರೀ ಎನ್. ಸುಬ್ಬರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿರುತ್ತದೆ. ಅದರಂತೆ, ವಿಚಾರಣಾಧಿಕಾರಿಗಳು ಈ ಪ್ರಕರಣದ ಕುರಿತು ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಮೇಲೆ ಓದಲಾದ ಕ್ರ.ಸಂ. (7) ದಿನಾಂಕ: 26–12–2007ರಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಶ್ರೀ ರುದ್ರೇಶ್ವರಯ್ಯ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧದ ಆರೋಪಗಳ ಕುರಿತು ಈ ಕೆಳಕಂಡಂತೆ ನಿರ್ಣಯಿಸಿ ವರದಿ ನೀಡಿರುತ್ತಾರೆ.

ಆರೋಪ : 1 – ರುಜುವಾತಾಗಿರುತ್ತದೆ.
ಆರೋಪ : 2 – ರುಜುವಾತಾಗಿರುವುದಿಲ್ಲ.
ಆರೋಪ : 3 – ರುಜುವಾತಾಗಿರುತ್ತದೆ.
ಆರೋಪ : 4 – ರುಜುವಾತಾಗಿರುವುದಿಲ್ಲ.

ಆದ್ದರಿಂದ ವಿಚಾರಣಾ ವರದಿಯಲ್ಲಿ ಶ್ರೀ ರುದ್ರೇಶ್ವರಯ್ಯ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಎರಡು ಆರೋಪಗಳು ಸಾಬೀತಾಗಿದ್ದರಿಂದ ಶ್ರೀಯುತರಿಗೆ ಮೇಲೆ ಓದಲಾದ ಕ್ರ.ಸಂ. (8)ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಅದರಂತೆ, ಶ್ರೀ ರುದ್ರೇಶ್ವರಯ್ಯ, ನಿವೃತ್ತ ತಹಶೀಲ್ದಾರ್ ಇವರು ಈ ಕೆಳಕಂಡಂತೆ ಲಿಖಿತ ಸಮಜಾಯಿಷಿಯನ್ನು ನೀಡಿರುತ್ತಾರೆ.

**ಆರೋಪ: 1 –** ಕರ್ನಾಟಕ ಭೂ ಸುಧಾರಣಾ ಕಾಯಿದೆ ಕಲಂ 80ರ ಪ್ರಕಾರ ವ್ಯವಸಾಯದ ಜಮೀನನ್ನು ಖರೀದಿಸುವ ಬಗ್ಗೆ ಅನುಮತಿ ನೀಡುವ ಅಧಿಕಾರ ಉಪವಿಭಾಗಾಧಿಕಾರಿಗಳಿಗೆ ನೀಡಿರುವ ಬಗ್ಗೆ ತಿಳಿಸುತ್ತದೆಯೇ ವಿನಾಃ ಕೃಷಿ ಕಾರ್ಮಿಕರ ದೃಢೀಕರಣ ನೀಡುವ ಅಧಿಕಾರ ತಹಶೀಲ್ದಾರರಿಗೆ ಇರುವುದಿಲ್ಲವೆಂಬ ಬಗ್ಗೆ ತಿಳಿಸುವುದಿಲ್ಲವೆಂದು ತಮ್ಮ ವಿರುದ್ಧದ ಆರೋಪವನ್ನು ಕೈಬಿಡುವಂತೆ ಕೋರಿರುತ್ತಾರೆ.

**ಆರೋಪ: 3 –** ಶ್ರೀಮತಿ ದೇವಮ್ಮ, ಶ್ರೀ ಪುಂಡಲೀಕರಾವ್‌ರವರು ಭೂ ನ್ಯಾಯ ಮಂಡಳಿಯ ಆದೇಶದಂತೆ, ಖಾತೆ ಕೋರಿದ್ದು ಅದರಂತೆ ಗಣಕ ಯಂತ್ರಕ್ಕೆ ಅಳವಡಿಸಿ, ಸಂಬಂಧಪಟ್ಟ ರಾಜಸ್ವ ನಿರೀಕ್ಷಕರಿಗೆ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದ್ದು, ರಾಜಸ್ವ ನಿರೀಕ್ಷಕರು ದಾಖಲೆಗಳು ಸರಿ ಇಲ್ಲವೆಂದು ಖಾತೆಯನ್ನು ವಜಾ ಮಾಡಿರುತ್ತಾರೆ. ಅದರಂತೆ, ಅರ್ಜಿದಾರರಿಗೆ ಅರ್ಜಿಯನ್ನು ವಿಲೇ ಇಟ್ಟಿರುವ ಬಗ್ಗೆ ಹಿಂಬರಹ ಕೊಡಲಾಗಿದೆ ಎಂದು ತಿಳಿಸುತ್ತಾ ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಆಪಾದಿತರ ವಿರುದ್ಧ ಆಪಾದನೆ ಸಾಬೀತಾದ ಬಗ್ಗೆ ವಿಚಾರಣಾಧಿಕಾರಿಗಳು ಭೂ ಸುಧಾರಣೆ ಕಾಯ್ದೆ ಕಲಂ 79(ಎ) ಮತ್ತು (ಬಿ) ರೀತ್ಯಾ ಜಮೀನು ಕ್ರಯಕ್ಕೆ ಪಡೆದುಕೊಳ್ಳಲು ಉಪ ವಿಭಾಗಾಧಿಕಾರಿಗಳ ಅನುಮತಿ ಪಡೆಯಬೇಕಾಗಿರುತ್ತದೆ ಎಂದು ನಮೂದಿಸಿದ್ದರೂ, ತಹಶೀಲ್ದಾರರು ಅದನ್ನು ನಿರ್ಲಕ್ಷಿಸಿ ರಾಜಸ್ವ ನಿರೀಕ್ಷಕರ ವರದಿಯಂತೆ ದೃಢೀಕರಣ ಪತ್ರ ನೀಡಲು ಆದೇಶಿಸಿರುತ್ತಾರೆ. ಜಮೀನು ಖರೀದಿಸಲು ನಿಯಮ 80ರಂತೆ ಉಪವಿಭಾಗಾಧಿಕಾರಿಗಳಿಗೆ ಮಾತ್ರ ಇರುತ್ತದೆ. ಅದನ್ನು ತಹಶೀಲ್ದಾರರಿಗೆ ಕೊಟ್ಟಿಲ್ಲ. ಆದರೂ ಸದರಿ ಅಧಿಕಾರಿಯವರು ಅವರಿಗಿಲ್ಲದ ಅಧಿಕಾರವನ್ನು ಅವರೇ ವಹಿಸಿಕೊಂಡು ದೃಢ ಪತ್ರ ನೀಡಿರುತ್ತಾರೆ. ಇದರಿಂದ ಆಪಾದಿತರು ಅಧಿಕಾರ ದುರುಪಯೋಗ ಮಾಡಿಕೊಂಡಿರುವ ಆಪಾದನೆ ರುಜುವಾತಾಗಿದೆಯೆಂದು ತಿಳಿಸಿರುತ್ತಾರೆ. 3ನೇ ಆಪಾದನೆ ಬಗ್ಗೆ ವಿಚಾರಣಾಧಿಕಾರಿಗಳು ಭೂ ನ್ಯಾಯ ಮಂಡಳಿಯ ಆದೇಶವಿರದೇವರಪುರ ಗ್ರಾಮದ ಸರ್ವೆ ನಂ.123 ಪಿ ಗೆ ಆಗಿದ್ದು 124/7ಕ್ಕೆ ಆದೇಶವಾಗಿಲ್ಲ/ ಆದರೂ ಆಪಾದಿತರು 124/7ನೇ ಜಮೀನನ್ನು ಸ್ಥಳ ತನಿಖೆ ಮಾಡಿ ಖಾತೆ ಮಾಡಲು ಆದೇಶ ಮಾಡಿದ್ದಾರೆಂದು ಕಾಣಿಸಲಾಗಿದೆ. ನ್ಯಾಯ ಮಂಡಳಿ ತಪ್ಪಿದ್ದಲ್ಲಿ ನ್ಯಾಯ ಮಂಡಳಿಯ ಮುಂದೆ ಪ್ರಕರಣ ಇಟ್ಟು ತಿದ್ದುಪಡಿ ಆದೇಶ ಪಡೆದುಕೊಳ್ಳಬೇಕಾದದ್ದು. ಆಪಾದಿತರ ಕರ್ತವ್ಯವಾಗಿತ್ತು. ಆ ರೀತಿ ಮಾಡದೇ ತಾವೇ ಆದೇಶ ಮಾಡಿ ಕರ್ತವ್ಯ ಲೋಪವೆಸಗಿದ್ದಾರೆಂದು ಆದುದರಿಂದ 3ನೇ ಆಪಾದನೆ ರುಜುವಾತಾಗಿದೆಯೆಂದು ತೀರ್ಮಾನಿಸಿರುತ್ತಾರೆ.

ಶ್ರೀ ರುದ್ರೇಶ್ವರಯ್ಯ, ನಿವೃತ್ತ ತಹಶೀಲ್ದಾರ್ ಇವರು ಸಲ್ಲಿಸಿದ್ದ ಲಿಖಿತ ಸಮಜಾಯಿಷಿಯನ್ನು ಪರಿಶೀಲಿಸಿ, ಇಲಾಖಾ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿರುವುದರಿಂದ, ಕೆ.ಸಿ.ಎಸ್.ಆರ್. ನಿಯಮ 214ರಡಿಯಲ್ಲಿ ಅವರ ನಿವೃತ್ತಿ ವೇತನದಲ್ಲಿ ಶೇಕಡ 10 ರಷ್ಟನ್ನು ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಮೇಲೆ ಓದಲಾದ ಕ್ರ.ಸಂ. (10)ರಲ್ಲಿ ದಿನಾಂಕ: 02–02–2009ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಅದರಂತೆ, ಮೇಲೆ ಓದಲಾದ ಕ್ರ.ಸಂ. (11)ರಲ್ಲಿ ದಿನಾಂಕ: 13–05–2009ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಶ್ರೀ ರುದ್ರೇಶ್ವರಯ್ಯ, ತಹಶೀಲ್ದಾರ್ (ನಿವೃತ್ತ) ಇವರ ನಿವೃತ್ತಿ ವೇತನದಿಂದ ಶೇಕಡ 10ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿತ್ತು. ಆದರೆ ಈ ಬಗ್ಗೆ ಸರ್ಕಾರವು ಶ್ರೀಯುತರ ನಿವೃತ್ತಿ ವೇತನದಿಂದ ದಂಡನೆಯನ್ನು ಶೇಕಡ 10 ರಷ್ಟರಿಂದ ಶೇಕಡ 2 ರಷ್ಟನ್ನು ಕಡಿತಗೊಳಿಸುವಂತೆ ಪರಿಷ್ಕರಿಸಿ ವಿಧಿಸಲು ತೀರ್ಮಾನಿಸಿ ಅದರಂತೆ ಮೇಲೆ ಓದಲಾದ ಕ್ರ.ಸಂ. (12) ರಲ್ಲಿ ದಿನಾಂಕ: 07–09–2009ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (13) ರಲ್ಲಿ ದಿನಾಂಕ: 20–10–2009ರ ಕರ್ನಾಟಕ ಲೋಕಸೇವಾ ಆಯೋಗವು ಶ್ರೀ ರುದ್ರೇಶ್ವರಯ್ಯ ತಹಶೀಲ್ದಾರ್ ನಿವೃತ್ತ ಇವರ ನಿವೃತ್ತಿ ವೇತನದಲ್ಲಿ ಶೇ. 2 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ಪರಿಷ್ಕೃತ ದಂಡನೆ ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿರುತ್ತದೆ.

ಆದ್ದರಿಂದ ಶ್ರೀ ರುದ್ರೇಶ್ವರಯ್ಯ ಹಿಂದಿನ ತಹಶೀಲ್ದಾರ್ ನಂಜನಗೂಡು ಪ್ರಸ್ತುತ ನಿವೃತ್ತ ತಹಶೀಲ್ದಾರ್ ಇವರ ನಿವೃತ್ತಿ ವೇತನದಿಂದ ಶೇಕಡ 2ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2005, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ರುದ್ರೇಶ್ವರಯ್ಯ, ಹಿಂದಿನ ತಹಶೀಲ್ದಾರ್ ನಂಜನಗೂಡು, ಪ್ರಸ್ತುತ ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಆರೋಪಗಳು ಸಾಬೀತಾಗಿದ್ದರಿಂದ ಕೆಸಿಎಸ್‌ಆರ್ ನಿಯಮ 214ರಡಿಯಲ್ಲಿ ಅವರ ನಿವೃತ್ತಿ ವೇತನದಿಂದ ಶೇಕಡ 2% ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2819

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು–3)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2009–10ನೇ ಸಾಲಿಗೆ ಮೊದಲನೇ ಕಂತಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ಗ್ರಾಅಪ.4.ಡಬ್ಲ್ಯೂಜಿಪಿ. 09 ದಿನಾಂಕ: 13–04–2009.

2) ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ.ಪಿ.ಸಿ.(ಪಿ) 19/125/ಕೆಎಆರ್/2009– ಡಬ್ಲ್ಯೂಜಿಎಸ್ ದಿನಾಂಕ: 6–11–2009.

3) ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ.ಪಿ.ಸಿ.(ಪಿ) 19/320/ಸಿಎಎಸ್ 2009– ಡಬ್ಲ್ಯೂಜಿಎಸ್ ದಿನಾಂಕ: 11–11–2009.

4) ಆರ್ಥಿಕ ಇಲಾಖೆಯ ಜಮಾ ಧೃಢೀಕರಣ ಪತ್ರ CCS No. FD 13. BGL-2009. ದಿನಾಂಕ:20–11–2009.

**ಪ್ರಸ್ತಾವನೆ:**

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನವನ್ನು ಮೇಲೆ ಓದಲಾದ ಪತ್ರ (1) ರಂತೆ 2009–10ನೇ ಸಾಲಿನಲ್ಲಿ ಮುಂದುವರೆಸಲಾಗಿದೆ. ಭಾರತ ಸರ್ಕಾರದ ಯೋಜನಾ ಆಯೋಗದ ಪಶ್ಚಿಮ ಘಟ್ಟಗಳ ಸಚಿವಾಲಯವು ಮೇಲೆ ಓದಲಾದ ಪತ್ರ (2)ರಲ್ಲಿ ಈ ಕಾರ್ಯಕ್ರಮದ ಅನುಷ್ಠಾನ ಕಾರ್ಯವನ್ನು 2009–10ನೇ ಸಾಲಿನಲ್ಲಿ ಮುಂದುವರೆಸುವ ಸಲುವಾಗಿ ರಾಜ್ಯಕ್ಕೆ ಹಂಚಿಕೆ ಮಾಡಿರುವ ವಿಶೇಷ ಕೇಂದ್ರ ಅನುದಾನ ರೂ. 2924.00 ಲಕ್ಷಗಳ ವಾರ್ಷಿಕ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿರುತ್ತದೆ. ಇದರಲ್ಲಿ ಶೇ. 90 ಭಾಗ ಅಂದರೆ ರೂ. 2631.60 ಲಕ್ಷ ಕೇಂದ್ರ ಸರ್ಕಾರ ಬಿಡುಗಡೆ ಮಾಡಲಿರುವ ನಿಧಿ ರೂಪದ್ದಾಗಿದ್ದು, ಉಳಿಕೆ ಶೇ. 10 ಭಾಗ ಅಂದರೆ ರೂ. 292.40 ಲಕ್ಷ ರಾಜ್ಯದ ಪಾಲಾಗಿರುತ್ತದೆ. ಆ ಸಚಿವಾಲಯವು ಮೇಲೆ ಓದಲಾದ ಪತ್ರ (3)ರಲ್ಲಿ ಪ್ರಸಕ್ತ ಸಾಲಿನ ಒಟ್ಟಾರೆ ಅನುದಾನ ರೂ. 2924.00 ಲಕ್ಷ ಪೈಕಿ ಶೇ. 90 ರಷ್ಟು ಅಂದರೆ ರೂ. 2631.60 ಲಕ್ಷ ಆಗಲಿದ್ದು, ಅದರಲ್ಲಿ ವಿಶೇಷ ಕೇಂದ್ರ ಅನುದಾನದ ನಿಧಿ ಭಾಗದ ಮೊತ್ತವಾದ ರೂ. 1973.70 ಲಕ್ಷಗಳಲ್ಲಿ 2007–2008ನೇ ಸಾಲಿನ ಖರ್ಚಾಗದೇ ಉಳಿದ ಅನುದಾನ ರೂ. 186.37 ಲಕ್ಷಗಳನ್ನು ಕಡಿತಗೊಳಿಸಿ ಉಳಿಕೆ ರೂ. 1787.33 ಲಕ್ಷಗಳನ್ನು ಮೊದಲನೇ ಕಂತಿನ ಅನುದಾನವಾಗಿ ರಾಜ್ಯಕ್ಕೆ ಬಿಡುಗಡೆ ಮಾಡಿದೆ. ಈ ಅನುದಾನವು ರಾಜ್ಯ ಸರ್ಕಾರದ ಖಾತೆಗೆ ಜಮಾ ಆಗಿರುವ ಬಗ್ಗೆ ಆರ್ಥಿಕ ಇಲಾಖೆಯು ಮೇಲೆ ಓದಲಾದ ಪತ್ರ (5)ರಂತೆ ಜಮಾ ಧೃಢೀಕರಣ ಪತ್ರವನ್ನು ನೀಡಿರುತ್ತದೆ. ಈ ಅನುದಾನದ ಜೊತೆಗೆ ರಾಜ್ಯದ ಪಾಲಿನ ಶೇ.10 ಅನುದಾನವಾದ ರೂ. 178.73 ಲಕ್ಷಗಳನ್ನೂ ಸೇರಿಸಿ ರಾಜ್ಯದ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಗ್ರಾಅಪ.1. ಪಘಯೋ.2009(ಭಾಗ–1) ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2009**

ಕೇಂದ್ರ ಪುರಸ್ಕೃತ ಕಾರ್ಯಕ್ರಮವಾದ ಪಶ್ಚಿಮಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು 2009–10ನೇ ಸಾಲಿನಲ್ಲಿ ಅನುಮೋದಿತ ಕ್ರಿಯಾ ಯೋಜನೆಯ ಅನ್ವಯ ಅನುಷ್ಠಾನಗೊಳಿಸುವ ಸಲುವಾಗಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಮೊದಲನೇ ಕಂತಿನ ವಿಶೇಷ ಅನುದಾನ ರೂ. 1787.33 ಲಕ್ಷ ಮತ್ತು ರಾಜ್ಯದ ಪಾಲಿನ ಶೇ. 10 ಅನುದಾನವಾದ ರೂ. 178.73 ಲಕ್ಷಗಳನ್ನೂ ಸೇರಿಸಿ ಒಟ್ಟಾರೆ ರೂ. 1966.06 ಲಕ್ಷಗಳ ಪೈಕಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಯೋಜನಾ ಕೋಶಕ್ಕೆ ರೂ. 20.18ಲಕ್ಷ ಅನುದಾನ ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದ ಅನುದಾನ ರೂ. 1945.88 ಲಕ್ಷಗಳನ್ನು (ರೂ. ಹತ್ತೊಂಬತ್ತು ಕೋಟಿ ನಲವತ್ತೈದು ಲಕ್ಷ ಎಂಭತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ರಾಜ್ಯದ 11 ಜಿಲ್ಲಾ ಪಂಚಾಯತಿಗಳಿಗೆ ಅನುಬಂಧ–1 ರಲ್ಲಿ ತೋರಿಸಿರುವಂತೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1. 2009–10ನೇ ಸಾಲಿನಲ್ಲಿ ನಿಮ್ಮ ಜಿಲ್ಲೆಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ನಮೂದಿಸಿರುವ ಕಾರ್ಯಕ್ರಮಗಳನ್ನು ಮಾತ್ರ ನಿಮ್ಮ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನಕ್ಕೊಳಪಟ್ಟು ಅನುಷ್ಠಾನಗೊಳಿಸುವುದು.
2. ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರವು ಕಾಲಕಾಲಕ್ಕೆ ಹೊರಡಿಸುತ್ತಿರುವ ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸುವುದು.
3. ಒಂದು ವಲಯಕ್ಕೆ ನಿಗದಿಪಡಿಸಿರುವ ಅನುದಾನವನ್ನು ಇನ್ನೊಂದು ವಲಯಕ್ಕೆ ಯಾವುದೇ ಕಾರಣಕ್ಕೂ ವರ್ಗಾಯಿಸಬಾರದು.
4. ಹಾಲಿ ಬಿಡುಗಡೆ ಮಾಡಿರುವ ಅನುದಾನದಲ್ಲಿ ಅನುಮೋದಿತ ಕ್ರಿಯಾ ಯೋಜನೆಯಲ್ಲಿನ ಮುಂದುವರೆದ ಅಪೂರ್ಣ ಕಾಮಗಾರಿಗಳಿಗೆ ಪ್ರಥಮ ಆದ್ಯತೆ ನೀಡಿ ಪೂರ್ಣಗೊಳಿಸತಕ್ಕದ್ದು. ಆನಂತರ ತೋಟಗಾರಿಕೆ ಹಾಗೂ

ಅರಣ್ಯೀಕರಣ ಕಾಮಗಾರಿಗಳಿಗೆ ಆದ್ಯತೆ ನೀಡಿ ಅನುಮೋದನೆಯಾಗಿರುವ ಹೊಸ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಅನುಷ್ಠಾನಗೊಳಿಸುವುದು.

5. ಸಾಂಬಾರು ಮಂಡಳಿಯ ಕಾರ್ಯಕ್ರಮಗಳಿಗೆ ಪ್ರಸ್ತುತ ಕಂತಿನಲ್ಲಿ ಒದಗಿಸಿರುವ ಅನುದಾನ ರೂ. 14.85 ಲಕ್ಷಗಳನ್ನು ಆ ಮಂಡಳಿಗೆ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಯು ಬಿಡುಗಡೆ ಮಾಡುವುದು.
6. 2008–09ನೇ ಸಾಲಿನಲ್ಲಿ ಬಿಡುಗಡೆ ಮಾಡಿದ ಅನುದಾನದಲ್ಲಿ ಖರ್ಚಾಗದೇ ಉಳಿದ ಅನುದಾನವನ್ನು 2009–10ನೇ ಸಾಲಿಗೆ ನಿಮ್ಮ ಜಿಲ್ಲೆಯ ಅನುಮೋದಿತ ಅನುದಾನದಲ್ಲಿ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಸಮಯದಲ್ಲಿ ಹೊಂದಾಣಿಕೆ ಮಾಡಲಾಗುವುದು ಹಾಗೂ ಪ್ರಸಕ್ತ ಸಾಲಿನ ಮೊದಲನೇ ಕಂತಿನ ಅನುದಾನದಲ್ಲಿ ಶೇಕಡ 60ಕ್ಕಿಂತ ಹೆಚ್ಚಾಗಿ ಖರ್ಚು ಮಾಡಿದಲ್ಲಿ ಮಾತ್ರ ಎರಡನೇ ಕಂತಿನ ಅನುದಾನ ಈ ಸಾಲಿನಲ್ಲಿ ಕೇಂದ್ರದಿಂದ ಬಿಡುಗಡೆಯಾಗಲಿದೆ ಎಂಬ ಅಂಶವನ್ನು ಮುಖ್ಯವಾಗಿ ಗಮನಿಸುವುದು.
7. ಕೇಂದ್ರ ಸರ್ಕಾರವು ನಿಗದಿಪಡಿಸಿದ ನಮೂನೆಯಲ್ಲೇ ಪ್ರತಿ ತ್ರೈಮಾಸಿಕ ವರದಿಯನ್ನು ಸಕಾಲದಲ್ಲಿ ತಪ್ಪದೇ ಸರ್ಕಾರಕ್ಕೆ ಸಲ್ಲಿಸುವುದು. (Statement-I-Financial, Statement-II-Physical, verification report for beneficiary oriented schemes, verification report for schemes relating to Construction works)
8. ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಸಹಾಯಾನುದಾನದ ಬಿಲ್ಲಿನ ಮೇಲೆ ನಿಯಮಗಳ ಪ್ರಕಾರ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಖಜಾನೆಯಿಂದ ಪಡೆದು, ಅನುಷ್ಠಾನಾಧಿಕಾರಿಗಳಿಗೆ ಬಿಡುಗಡೆ ಮಾಡುವುದು.

2551–ಗುಡ್ಡಗಾಡು ಪ್ರದೇಶಗಳು01–ಪಶ್ಚಿಮಘಟ್ಟಗಳು–001–ನಿರ್ದೇಶನ ಮತ್ತು ಆಡಳಿತ–0–01–ಯೋಜನಾಕೋಶ–059–ಇತರೆ ಖರ್ಚು (ಯೋಜನೆ) (2551-01-001-0-01-059)

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ.ಗ್ರಾಅಪ:309: ಪಿಬಿಎಸ್.2009ರ ದಿನಾಂಕ: 02–12–2009ರಲ್ಲಿ ಸಹಮತಿಸಿದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಪಿ.ಸಿ. ಜಾಫರ್**

ನಿರ್ದೇಶಕರು, ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ ಘಟಕ
ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್.

**ಅನುಬಂಧ–1**

**ಸರ್ಕಾರದ ಆದೇಶದ ಸಂ.ಗ್ರಾಅಪ. 1 ಪಘಯೋ.2009(ಭಾಗ–1) ಬೆಂಗಳೂರು, ದಿನಾಂಕ: 2–12–09**

**ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2009–10 ನೇ ಸಾಲಿನ ಜಿಲ್ಲಾವಾರು ಮೊದಲನೇ ಕಂತಿನ ಅನುದಾನ ಬಿಡುಗಡೆ ತಃಖ್ತೆ**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆಯ ಹೆಸರು | 2009–10ನೇ ಸಾಲಿನ ಜಿಲ್ಲಾವಾರು ಅನುದಾನ ಹಂಚಿಕೆ | ವಿಶೇಷ ಕೇಂದ್ರ | ರಾಜ್ಯ ಪಾಲಿನ ಶೇ.10 ಅನುದಾನ | ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗುತ್ತಿರುವ ಮೊದಲನೇ ಕಂತಿನ ಒಟ್ಟು ಅನುದಾನ (ಕೇಂದ್ರ+ರಾಜ್ಯ) | ಕಾಲಂ 6ರ ಪೈಕಿ ಸಾಂಬಾರು ಮಂಡಳಿಗೆ ಬಿಡುಗಡೆ ಆಗಿರುವ ಅನುದಾನ |
|---|---|---|---|---|---|---|
| 1 | ಬೆಳಗಾಂ | 467.75 | 285.92 | 28.59 | 314.51 | – |
| 2 | ಚಾಮರಾಜನಗರ | 86.20 | 52.69 | 5.27 | 57.96 | – |
| 3 | ಚಿಕ್ಕಮಗಳೂರು | 276.35 | 168.92 | 16.89 | 185.81 | 3.09 |
| 4 | ದಕ್ಷಿಣ ಕನ್ನಡ | 206.30 | 126.10 | 12.61 | 138.71 | – |
| 5 | ಧಾರವಾಡ | 67.20 | 41.08 | 4.11 | 45.19 | – |
| 6 | ಹಾಸನ | 221.65 | 135.49 | 13.55 | 149.04 | 2.78 |

| ಕ್ರ. ಸಂ. | ಜಿಲ್ಲೆಯ ಹೆಸರು | 2009–10ನೇ ಸಾಲಿನ ಜಿಲ್ಲಾವಾರು ಅನುದಾನ ಹಂಚಿಕೆ | ವಿಶೇಷ ಕೇಂದ್ರ | ರಾಜ್ಯ ಪಾಲಿನ ಶೇ.10 ಅನುದಾನ | ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗುತ್ತಿರುವ ಮೊದಲನೇ ಕಂತಿನ ಒಟ್ಟು ಅನುದಾನ (ಕೇಂದ್ರ+ರಾಜ್ಯ) | ಕಾಲಂ 6ರ ಪೈಕಿ ಸಾಂಬಾರು ಮಂಡಳಿಗೆ ಬಿಡುಗಡೆ ಆಗಿರುವ ಅನುದಾನ |
|---|---|---|---|---|---|---|
| 7 | ಕೊಡಗು | 247.90 | 151.53 | 15.15 | 166.68 | 2.25 |
| 8 | ಮೈಸೂರು | 96.95 | 59.26 | 5.93 | 65.19 | – |
| 9 | ಶಿವಮೊಗ್ಗ | 410.45 | 250.89 | 25.09 | 275.98 | 3.81 |
| 10 | ಉಡುಪಿ | 296.85 | 181.45 | 18.14 | 199.59 | – |
| 11 | ಉತ್ತರ ಕನ್ನಡ | 516.40 | 315.66 | 31.56 | 347.22 | 2.92 |
| | **ಒಟ್ಟು :** | **2900.00** | **1768.99** | **176.89** | **1945.88** | **14.85** |
| 12 | ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ ಯೋಜನಾ ಕೋಶ | 30.00 | 18.34 | 1.84 | 20.18 | – |
| | **ಜುಮ್ಲಾ** | **2924.00** | **1787.33** | **178.73** | **1966.06** | **14.85** |

**ಡಾ: ಪಿ.ಸಿ. ಜಾಫರ್**

ನಿರ್ದೇಶಕರು, ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ ಘಟಕ

ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್.

ಪಿ.ಆರ್. 2820

**ವಿಷಯ:** 2009–10 ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ರಾಜ್ಯದ ಬಾಗಲಕೋಟೆ, ಬೆಂಗಳೂರು (ಗ್ರಾ) ಮತ್ತು ಬಿಜಾಪುರ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ. ಜೆ 12022/1/2009 ಎಸ್‌ಜಿಎಸ್‌ವೈ–I (10) ದಿನಾಂಕ: 16–04–09 ಮತ್ತು (42) ದಿನಾಂಕ: 07–08–09.

2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಎಸ್‌ಜೆವೈ 2009, ಬೆಂಗಳೂರು, ದಿನಾಂಕ: 20–05–09 ಮತ್ತು 25–09–09.

3) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ. ಜೆ 12022/1/2009 ಎಸ್‌ಜಿಎಸ್‌ವೈ–I (72) ದಿನಾಂಕ: 03–11–09 ಮತ್ತು (73) ದಿನಾಂಕ: 12–11–09.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಓದಲಾಗಿದೆ (1) ರಲ್ಲಿ ಒಂದನೇ ಕಂತಿನ ಅನುದಾನ ರೂ. 41,10,50,000ಗಳನ್ನು ರಾಜ್ಯದ ಎಲ್ಲಾ 29 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾಗಿತ್ತು. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಓದಲಾಗಿದೆ (2) ರಲ್ಲಿ ಮೊದಲನೇ ಕಂತಿನ ಅನುದಾನ ರೂ. 13,70,16,000 ಬಿಡುಗಡೆ ಮಾಡಬೇಕಿತ್ತು. ಆದರೆ ರಾಜ್ಯದ 2009–10ನೇ ಸಾಲಿನ ಆಯವ್ಯಯದಲ್ಲಿ ಕೆಲವೊಂದು ಜಿಲ್ಲಾ ಪಂಚಾಯತಿಗಳಿಗೆ ಒದಗಿಸಿರುವ ಅನುದಾನದಲ್ಲಿ ಕೊರತೆಯಿರುವುದರಿಂದ, ಆಯವ್ಯಯದ ಲಭ್ಯತೆಗೆ ಅನುಸಾರ ರೂ. 13.45,20,000ಗಳನ್ನು 29 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆಗೊಳಿಸಲಾಗಿದೆ. ಉಲ್ಲೇಖಿತ (3)ರ ಪತ್ರಗಳಲ್ಲಿ ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಜ್ಯದ ಬಾಗಲಕೋಟೆ, ಬೆಂಗಳೂರು (ಗ್ರಾ) ಮತ್ತು ಬಿಜಾಪುರ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನ ರೂ.

3,08,64,000ಗಳನ್ನು ಬಿಡುಗಡೆ ಮಾಡಿದ್ದು, ಇದರನ್ವಯ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ರೂ. 1,02,88,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದರೆ ರಾಜ್ಯದ 2009–10ನೇ ಸಾಲಿನ ಆಯವ್ಯಯದಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಒದಗಿಸಿರುವ ಅನುದಾನದಲ್ಲಿ ಕೊರತೆಯಿರುವುದರಿಂದ, ಜಿಲ್ಲೆಯ ಆಯವ್ಯಯದ ಲಭ್ಯತೆಗೆ ಅನುಸಾರ ರೂ. 67,43,000ಗಳನ್ನು ಬಾಗಲಕೋಟೆ, ಬೆಂಗಳೂರು ಗ್ರಾಮಾಂತರ ಮತ್ತು ಬಿಜಾಪುರ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆಗೊಳಿಸಬೇಕಾದುದರಿಂದ, ಈ ಆದೇಶ:

**ಸರ್ಕಾರದ ಆದೇಶ ಸಂ: ಗ್ರಾಅಪ. 7 ಎಸ್‌ಜೆವೈ 2009, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2009**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ರಾಜ್ಯ ಸರ್ಕಾರದ 2009–10ನೇ ಸಾಲಿನ ಆಯವ್ಯಯದಲ್ಲಿ ಜಿಲ್ಲೆಗೆ ಒದಗಿಸಿದ ಅನುದಾನದ ಲಭ್ಯತೆಗೆ ಅನುಸಾರವಾಗಿ ಎರಡನೇ ಕಂತಿನ ಅನುದಾನ ರೂ. 67,43,000ಗಳನ್ನು (ರೂ. ಅರವತ್ತೇಳು ಲಕ್ಷದ ನಲವತ್ತ ಮೂರು ಸಾವಿರ ಮಾತ್ರ) ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವಂತೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

1999ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75:25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು –01– ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2009–10ನೇ (2501–01–198–6–01)" (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ: 14–07–2005ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್‌ಜೆವೈ 2007 ದಿನಾಂಕ: 18–04–2007ರ ಸೂಚನೆಯಿಂದ ಕ್ರಮಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2009–10 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ Onlineಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 304 ಪಿಬಿಎಸ್ 2009 ದಿನಾಂಕ: 01–12–2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎ. ಮೇಘಣ್ಣವರ**

ನಿರ್ದೇಶಕರು, (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಅನುಬಂಧ

### ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಎಸ್‌ಜೆವೈ 2009, ಬೆಂಗಳೂರು ದಿನಾಂಕ: 08–12–2009

(ರೂ.ಗಳಲ್ಲಿ)

| ಕ್ರ. ಸಂ | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾದ ಎರಡನೇ ಕಂತಿನ ಅನುದಾನ | ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ನಿಗದಿ ಪಡಿಸಿದ ರಾಜ್ಯದ ಪಾಲಿನ ಅನುದಾನ | 2009–10ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತಿ ಗಳಿಗೆ ಈವರೆವಿಗೂ ಬಿಡುಗಡೆ ಮಾಡಿದ ಅನುದಾನ | ಜಿಲ್ಲಾ ಪಂಚಾಯತಿ ಗಳಲ್ಲಿ ಲಭ್ಯವಿರುವ ಅನುದಾನ | ಜಿಲ್ಲಾ ಆಯವ್ಯಯದ ಲಭ್ಯತೆಯಂತೆ ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 97,02,000 | 32,34,000 | 63,00,000 | 32,33,000 | 30,67,000 | 30,67,000 |
| 2 | ಬೆಂಗಳೂರು (ಗ್ರಾ) | 402 | 0300ZZ8001 | 21,52,000 | 7,17,000 | 17,00,000 | 25,87,000 | (–) 8,87,000 | 0 |
| 3 | ಬಿಜಾಪುರ | 414 | 2800ZZ9152 | 1,90,10,000 | 63,37,000 | 1,23,00,000 | 86,24,000 | 36,76,000 | 36,76,000 |
| | ಒಟ್ಟು: | | | **3,08,64,000** | **1,02,88,000** | **2,03,00,000** | **1,44,44,000** | **–** | **67,43,000** |

**ಪಿ.ಎ. ಮೇಘಣ್ಣವರ**

ಪಿ.ಆರ್. 2821

ನಿರ್ದೇಶಕರು, (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಸಂವಾಪ್ರ:36:ವಾಪ್ರಪ:09, ಬೆಂಗಳೂರು, ದಿನಾಂಕ: 9ನೇ ಡಿಸೆಂಬರ್ 2009

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪತ್ರಿಕೆಗಳು ಹಾಗೂ ವಿದ್ಯುನ್ಮಾನ ಮಾಧ್ಯಮಗಳ ಪಾತ್ರ ಮಹತ್ತರವಾಗಿದ್ದು, ಜನಸಾಮಾನ್ಯರ ಸಂವೇದನೆಗಳಿಗೆ ಸ್ಪಂದಿಸುತ್ತಾ, ಆರೋಗ್ಯವಂತ ಸಮಾಜ ನಿರ್ಮಾಣಕ್ಕೆ ಕಾಣಿಕೆ ನೀಡುತ್ತಿವೆ. ಈ ಹಿನ್ನೆಲೆಯಲ್ಲಿ ಮಾಧ್ಯಮ ಪ್ರತಿನಿಧಿಗಳು ಕ್ರಿಯಾಶೀಲರಾಗಿ ಕಾರ್ಯನಿರ್ವಹಿಸಲು ಅನುಕೂಲವಾಗುವಂತೆ ರಾಜ್ಯದಲ್ಲಿ, ಜಿಲ್ಲಾ ಕೇಂದ್ರಗಳಲ್ಲಿ ಸುಸಜ್ಜಿತ ಪತ್ರಿಕಾ ಭವನಗಳನ್ನು ನಿರ್ಮಿಸಲು ಸರ್ಕಾರವು ತೀರ್ಮಾನಿಸಿ, ತತ್ಸಂಬಂಧದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ:36: ವಾಪ್ರಪ:09, ದಿನಾಂಕ: 09–12–2009ರಲ್ಲಿ ಕೆಲವು ಜಿಲ್ಲೆಗಳಲ್ಲಿ ಪತ್ರಿಕಾ ಭವನಗಳನ್ನು ನಿರ್ಮಾಣ ಮಾಡಲು ಹಾಗೂ ಹಾಲಿ ಇರುವ ಪತ್ರಿಕಾ ಭವನಗಳನ್ನು ಸುಸಜ್ಜಿತಗೊಳಿಸಲು ಒಟ್ಟು 3.00ಕೋಟಿ ರೂ.ಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ತತ್ಸಂಬಂಧದಲ್ಲಿ ಪತ್ರಿಕಾ ಭವನಗಳ ನಿರ್ಮಾಣ ಹಾಗೂ ನಿರ್ಮಾಣಗೊಂಡಿರುವ ಭವನಗಳ ದುರಸ್ತಿ, ಅಭಿವೃದ್ಧಿ, ನಿರ್ವಹಣೆ, ಮೇಲ್ವಿಚಾರಣೆ ಇವುಗಳ ಉದ್ದೇಶಕ್ಕಾಗಿ ಈ ಕೆಳಕಂಡಂತೆ ಜಿಲ್ಲಾಮಟ್ಟದ ಸಮಿತಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಲಾಗಿದೆ.

| | | |
|---|---|---|
| 1. | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಜಿಲ್ಲಾ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 3. | ಜಿಲ್ಲೆಯ ವಾರ್ತಾ ಇಲಾಖೆಗೆ ಸಂಬಂಧಪಟ್ಟ ಉಪನಿರ್ದೇಶಕರು ಅಥವಾ ಸಹಾಯಕ ನಿರ್ದೇಶಕರು | ಸದಸ್ಯ ಕಾರ್ಯದರ್ಶಿ |

**ಈ ಸಮಿತಿಯ ಜವಾಬ್ದಾರಿ,**

1. ನಿರ್ಮಾಣ ಕಾರ್ಯದ ಉಸ್ತುವಾರಿಯನ್ನು ನೋಡಿಕೊಳ್ಳುವುದು.
2. ಸಮಿತಿ ಕನಿಷ್ಠ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ನಿರ್ಮಾಣ ಪ್ರಗತಿ ಪರಿಶೀಲನೆ ಮಾಡುವುದು.
3. ಕ್ಲುಪ್ತಕಾಲಕ್ಕೆ ಕಟ್ಟಡವನ್ನು ಪೂರ್ಣಗೊಳಿಸುವುದು.
4. ಸರ್ಕಾರಕ್ಕೆ ಆಗಾಗ್ಗೆ ಪ್ರಗತಿ ಬಗ್ಗೆ ವರದಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ನಾರಾಯಣಪ್ಪ**

ಪಿ.ಆರ್. 2822

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ವೃಂದದ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿಗಳಿಗೆ ಹೆಚ್ಚುವರಿಯಾಗಿ ವಿವಿಧ ಭತ್ಯೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂ: ಜೆಆರ್ ಒ (1) 115/07–08 ದಿನಾಂಕ:13–08–2008

2) ಸರ್ಕಾರದ ಆದೇಶ ಸಂಖ್ಯೆ: ಆಕುಕ 718 ಹೆಚ್ ಎಸ್ ಹೆಚ್ 2008 ದಿನಾಂಕ: 22–12–2008

3) ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿತವಾದ ಸಮಿತಿಯ ವರದಿ

4) ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ, ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 28–10–2009 ರಂದು ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ವೈದ್ಯಾಧಿಕಾರಿಗಳ ಸಂಘವು ಸಲ್ಲಿಸಿದ ಬೇಡಿಕೆಗಳಿಗೆ ಅನುಗುಣವಾಗಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ವೈದ್ಯರುಗಳಿಗೆ ವೈದ್ಯಕೀಯ ಶಿಕ್ಷಣ ಇಲಾಖೆಯ ಬೋಧಕ ಸಿಬ್ಬಂದಿಯ ಸರಿಸಮಾನವಾದ ವೇತನ ಮತ್ತು ಭತ್ಯೆಗಳನ್ನು ನಿಗದಿಪಡಿಸುವಂತೆ ಹಾಗೂ ಇತರ ಭತ್ಯೆಗಳನ್ನು ಮಂಜೂರು ಮಾಡುವಂತೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿದ್ದರು.

ಈ ಹಿಂದೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳು ನಡೆಸಿದ ಮುಷ್ಕರದ ಸಂದರ್ಭದಲ್ಲಿ ವೈದ್ಯಾಧಿಕಾರಿಗಳ ಸಂಘದ ಬೇಡಿಕೆಗಳಿಗೆ ಇಲಾಖೆಯು ಸ್ಪಂದಿಸಿ, ಅವರ ಪ್ರಮುಖ ಬೇಡಿಕೆಗಳಾದ ಇಲಾಖೆಯ ವೈದ್ಯಾಧಿಕಾರಿಗಳಿಗೆ ವೈದ್ಯಕೀಯ ಶಿಕ್ಷಣ ಇಲಾಖೆಯ ಬೋಧಕ ವರ್ಗದವರಿಗೆ ನೀಡಲಾಗುವ ವೇತನ ಭತ್ಯೆಗಳಿಗೆ ಸಮಾನಾಂತರವಾಗಿ ನೀಡುವ ಬಗ್ಗೆ ಮತ್ತು ಗ್ರಾಮೀಣ ಭತ್ಯೆ, ಸ್ನಾತಕೋತ್ತರ ಪದವಿ ಭತ್ಯೆ, ಶೈಕ್ಷಣಿಕ ಭತ್ಯೆ ಮುಂತಾದವುಗಳ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಗಿತ್ತು.

ಈ ಸಮಿತಿಯು ವೈದ್ಯರ ಸಂಘದ ಬೇಡಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಲು ಅನೇಕ ಬಾರಿ ಸಭೆ ಸೇರಿ, ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ವಾಯತ್ತ ಸಂಸ್ಥೆಗಳಲ್ಲಿನ ಬೋಧಕ ವೈದ್ಯರುಗಳಿಗೆ ಕೇಂದ್ರ ಸರ್ಕಾರದ ಎ.ಐ.ಸಿ.ಟಿ.ಇ ವೇತನ ಮತ್ತು ಭತ್ಯೆಗಳನ್ನು ನೀಡಲಾಗುತ್ತಿದ್ದು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳಿಗೆ ವೇತನ ಮತ್ತು ಭತ್ಯೆಗಳನ್ನು ರಾಜ್ಯ ಸರ್ಕಾರದ ವೇತನ ಆಯೋಗದ ಶಿಫಾರಸ್ಸಿನ ಅನ್ವಯ ನಿಗದಿಪಡಿಸಿರುವ ಕಾರಣ ಎರಡು ಇಲಾಖೆಗಳಿಗೆ ಹೋಲಿಕೆ ಮಾಡಿ ವೇತನ ಸಮಾನಾಂತರಗೊಳಿಸುವುದು ಸಮಂಜಸವಲ್ಲವೆಂದು ಸಮಿತಿಯು ಅಭಿಪ್ರಾಯಪಟ್ಟು, ಅವರ ಕಾರ್ಯವಿಶೇಷತೆ, ಹೆಚ್ಚುವರಿ ವಿದ್ಯಾರ್ಹತೆ ಹಾಗೂ ಆಡಳಿತಾತ್ಮಕ ಕಾರ್ಯ ಇತ್ಯಾದಿಗಳನ್ನು ಪರಿಗಣಿಸಿ ಹಾಗೂ ನೆರೆರಾಜ್ಯಗಳಲ್ಲಿ ನೀಡುತ್ತಿರುವ ಭತ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಕೆಲವೊಂದು ಭತ್ಯೆಗಳನ್ನು ನೀಡಲು ಸಮಿತಿಯು ಮೇಲೆ ಓದಲಾದ ಕ್ರಮಾಂಕ (3)ರ ವರದಿಯಲ್ಲಿ ಶಿಫಾರಸ್ಸು ಮಾಡಿತ್ತು.

ಈ ಸಮಿತಿಯ ಶಿಫಾರಸ್ಸು ಹಾಗೂ ಆರ್ಥಿಕ ಇಲಾಖೆಯು ನೀಡಿರುವ ಅಭಿಪ್ರಾಯದ ಹಿನ್ನೆಲೆಯಲ್ಲಿ ದಿನಾಂಕ: 25–09–2009 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಕೆಳಕಂಡ ಭತ್ಯೆಗಳನ್ನು ನೀಡಲು ಅನುಮೋದಿಸಿತ್ತು.

1. ವೈದ್ಯರು ಗ್ರಾಮೀಣ ಪ್ರದೇಶದ ಕೇಂದ್ರಸ್ಥಾನದಲ್ಲಿ ವಾಸಿಸುವುದು ಕಡ್ಡಾಯವೆಂಬ ಷರತ್ತಿಗೆ ಒಳಪಟ್ಟು ಮಾಸಿಕ ರೂ. 6000/– ಗಳ ಗ್ರಾಮೀಣ ಭತ್ಯೆ.
2. (i) ಸ್ವಂತ ಖರ್ಚಿನಲ್ಲಿ ಸ್ನಾತಕೋತ್ತರ ಪದವಿ ಪಡೆದ ವೈದ್ಯರುಗಳಿಗೆ ಮಾಸಿಕ ರೂ. 8000/– ಹಾಗೂ ಡಿಪ್ಲೊಮ ಹೊಂದಿದ ವೈದ್ಯರಿಗೆ ರೂ. 5000/– ಸ್ನಾತಕೋತ್ತರ ಭತ್ಯೆ
   (ii) ಸರ್ಕಾರಿ ಖರ್ಚಿನಲ್ಲಿ ಸ್ನಾತಕೋತ್ತರ ಪದವಿ ಪಡೆದ ವೈದ್ಯರುಗಳಿಗೆ ರೂ. 5000/– ಹಾಗೂ ಡಿಪ್ಲೊಮ ಹೊಂದಿದ ವೈದ್ಯರಿಗೆ ರೂ. 3000/– ಸ್ನಾತಕೋತ್ತರ ಭತ್ಯೆ
3. ಈಗಾಗಲೇ 6 ವರ್ಷ ಗ್ರಾಮೀಣ ಸೇವೆ ಸಲ್ಲಿಸಿ ಪ್ರಸ್ತುತ ನಗರ ಪ್ರದೇಶದಲ್ಲಿ ಕಾರ್ಯನಿರ್ವಹಿಸುವ ತಜ್ಞತೆಯಿಲ್ಲದ ವೈದ್ಯರುಗಳಿಗೆ ಉತ್ತೇಜನ ನೀಡುವುದಕ್ಕಾಗಿ ಅವರುಗಳಿಗೆ ಮಾಸಿಕ ರೂ. 4500/– ವಿಶೇಷ ಭತ್ಯೆ.

ಆದರೆ, ಕರ್ನಾಟಕ ರಾಜ್ಯ ಸರ್ಕಾರಿ ವೈದ್ಯಾಧಿಕಾರಿಗಳ ಸಂಘವು ಸರ್ಕಾರದ ಮುಂದೆ ಇಟ್ಟಿದ್ದ ಹಲವು ಬೇಡಿಕೆಗಳನ್ನು ಈಗಾಗಲೇ ಪರಿಶೀಲಿಸಿ ಈಡೇರಿಸಲು ಕ್ರಮಗಳನ್ನು ಕೈಗೊಂಡಿದ್ದರೂ, ಕೆಲವು ಬೇಡಿಕೆಗಳ ಕುರಿತು ಸರ್ಕಾರವು ತೆಗೆದುಕೊಂಡಿರುವ ತೀರ್ಮಾನ ತೃಪ್ತಿಕರವಾಗಿಲ್ಲವೆಂದು ಮುಷ್ಕರದ ಹಾದಿ ಹಿಡಿದಿದ್ದರು. ವೈದ್ಯಾಧಿಕಾರಿಗಳ ಸಂಘದ

ಬೇಡಿಕೆಗಳನ್ನು ಕುರಿತು ಚರ್ಚಿಸಲು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 28–10–2009ರಂದು ಸಭೆ ನಡೆಯಿತು. ಸದರಿ ಸಭೆಯಲ್ಲಿ ಕೆಲವು ಸಚಿವರು, ಆರ್ಥಿಕ ಇಲಾಖೆಯ ಅಧಿಕಾರಿಗಳನ್ನು ಒಳಗೊಂಡಂತೆ ಇತರೆ ಅಧಿಕಾರಿಗಳು ಹಾಗೂ ಸಂಘದ ಪದಾಧಿಕಾರಿಗಳು ಉಪಸ್ಥಿತರಿದ್ದರು. ಪ್ರಸ್ತುತ ರಾಜ್ಯದ ಆರ್ಥಿಕ ವಸ್ತುಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ವೈದ್ಯರ ಸಂಘದ ಬೇಡಿಕೆಗಳ ಬಗ್ಗೆ ಕೂಲಂಕಷವಾಗಿ ಸದರಿ ಸಭೆಯಲ್ಲಿ ಚರ್ಚಿಸಲಾಯಿತು. ಈ ವಿಷಯವನ್ನು ಸೌಹಾರ್ದಯುತವಾಗಿ ಇತ್ಯರ್ಥಪಡಿಸಲು ದಿನಾಂಕ: 25–09–2009ರಂದು ನಡೆದ ಸಚಿವ ಸಂಪುಟದಲ್ಲಿ ತೆಗೆದುಕೊಂಡಿರುವ ತೀರ್ಮಾನವನ್ನು ಪರಿಷ್ಕರಿಸಿ ಕೆಲವು ಭತ್ಯೆಗಳನ್ನು ಹೆಚ್ಚುವರಿಯಾಗಿ ನೀಡುವ ಜೊತೆಗೆ ತುರ್ತುಚಿಕಿತ್ಸಾ ಭತ್ಯೆ ಮತ್ತು ಸೂಪರ್ ಸ್ಪೆಷಾಲಿಟಿ ಭತ್ಯೆಯನ್ನು ಸಹ ನೀಡಲು ದಿನಾಂಕ: 28–10–2009ರ ಸಭೆಯಲ್ಲಿ ತೀರ್ಮಾನಿಸಲಾಯಿತು.

ಮೇಲೆ ತಿಳಿಸಿದಂತೆ ತೆಗೆದುಕೊಂಡ ಪರಿಷ್ಕೃತ ತೀರ್ಮಾನದ ಹಿನ್ನೆಲೆಯಲ್ಲಿ ಈ ವಿಷಯದ ಬಗ್ಗೆ ಮತ್ತೊಮ್ಮೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿ ದಿನಾಂಕ: 28–10–2009ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದ ಅನ್ವಯ ಆದೇಶ ಹೊರಡಿಸಿ ನಂತರ ಸಚಿವ ಸಂಪುಟದ ಘಟನೋತ್ತರ ಅನುಮೋದನೆ ಪಡೆಯುವಂತೆ ಆರ್ಥಿಕ ಇಲಾಖೆಯು ದಿನಾಂಕ: 02–12–2009 ರ ಅ.ಟಿ. ಸಂಖ್ಯೆ:ಆಇ/1390/ವೆಚ್ಚ–5/2009ರಲ್ಲಿ ತಿಳಿಸಿದೆ.

ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂ: ಆಕುಕ 718 ಹೆಚ್‌ಎಸ್‌ಹೆಚ್ 2008, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವಿವಿಧ ವೃಂದದ ವೈದ್ಯಾಧಿಕಾರಿಗಳಿಗೆ ಹಾಗೂ ದಂತ ಆರೋಗ್ಯಾಧಿಕಾರಿಗಳಿಗೆ ಕೆಳಕಂಡಂತೆ ವಿವಿಧ ಭತ್ಯೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮಂಜೂರು ಮಾಡಿದೆ.

1. ವೈದ್ಯರು ಗ್ರಾಮೀಣ ಪ್ರದೇಶದ *ಕೇಂದ್ರಸ್ಥಾನದಲ್ಲಿ ವಾಸಿಸುವುದು ಕಡ್ಡಾಯವೆಂಬ ಷರತ್ತಿಗೆ ಒಳಪಟ್ಟು ಮಾಸಿಕ ರೂ. 7000/– (ರೂಪಾಯಿ ಏಳು ಸಾವಿರಗಳು ಮಾತ್ರ) ಗ್ರಾಮೀಣ ಭತ್ಯೆ.
2. ಡಿಪ್ಲೊಮ ಪಡೆದ ವೈದ್ಯರುಗಳಿಗೆ ಮಾಸಿಕ ರೂ. 6000/– (ರೂಪಾಯಿ ಆರು ಸಾವಿರಗಳು ಮಾತ್ರ) ಹಾಗೂ ಸ್ನಾತಕೋತ್ತರ ಪದವಿ ಪಡೆದ ವೈದ್ಯರಿಗೆ ಮಾಸಿಕ ರೂ. 8000/– (ರೂಪಾಯಿ ಎಂಟು ಸಾವಿರಗಳು ಮಾತ್ರ) ರಂತೆ ಸ್ನಾತಕೋತ್ತರ ಭತ್ಯೆ
3. ವಿವಿಧ ವೃಂದಗಳ ಎಲ್ಲಾ ವೈದ್ಯರಿಗೆ ಮಾಸಿಕ ರೂ. 3000/– ( ರೂಪಾಯಿ ಮೂರು ಸಾವಿರಗಳು ಮಾತ್ರ) ರಂತೆ ತುರ್ತು ಚಿಕಿತ್ಸಾ ಭತ್ಯೆ.
4. ಸೂಪರ್ ಸ್ಪೆಷಾಲಿಟಿ ಅರ್ಹತೆ ಹೊಂದಿರುವ ತಜ್ಞ ವೈದ್ಯರುಗಳಿಗೆ ಮಾಸಿಕ ರೂ. 10,000/– (ರೂಪಾಯಿ ಹತ್ತು ಸಾವಿರಗಳು ಮಾತ್ರ) ಸೂಪರ್ ಸ್ಪೆಷಾಲಿಟಿ ಭತ್ಯೆ.
5. ಡಿಪ್ಲೊಮ ಅಥವಾ ಸ್ನಾತಕೋತ್ತರ ಪದವಿ ಪಡೆಯದೇ ಕನಿಷ್ಠ 6 ವರ್ಷಗಳ ಗ್ರಾಮೀಣ ಸೇವೆಯನ್ನು ಸಲ್ಲಿಸಿ, ಪ್ರಸ್ತುತ ನಗರ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುತ್ತಿರುವ ವೈದ್ಯರುಗಳಿಗೆ ಮಾಸಿಕ ರೂ. 5000/– (ರೂಪಾಯಿ ಐದು ಸಾವಿರಗಳು ಮಾತ್ರ) ರಂತೆ ವಿಶೇಷ ಭತ್ಯೆ.

* **ವಿವರಣೆ:** ಗ್ರಾಮೀಣ ಪ್ರದೇಶ ಅಂದರೆ, ಕರ್ನಾಟಕ ಮುನ್ಸಿಪಲ್ ಕಾರ್ಪೊರೇಷನ್ ಕಾಯ್ದೆ 1976 ಅಥವಾ ಕರ್ನಾಟಕ ಮುನ್ಸಿಪಾಲಿಟೀಸ್ ಕಾಯ್ದೆ 1964 ರಲ್ಲಿ ವ್ಯಾಖ್ಯಾನಿಸಿರುವಂತೆ ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆಗೊಳ್ಳಲಿರುವ (Transitional area) ಪ್ರದೇಶಗಳ ಹೊರತಾದ ಪ್ರದೇಶ ಎಂದು ಪರಿಭಾವಿಸತಕ್ಕದ್ದು.

ಗ್ರಾಮೀಣ ಭತ್ಯೆ ಹಾಗೂ ಸ್ನಾತಕೋತ್ತರ ಭತ್ಯೆ ಇವುಗಳ ಪೈಕಿ ಯಾವುದಾದರೂ ಒಂದು ಭತ್ಯೆಯನ್ನು ಮಾತ್ರ ಪಡೆಯಲು ವೈದ್ಯರು ಅರ್ಹರಿರುತ್ತಾರೆ.

ಇದಕ್ಕೆ ತಗಲುವ ವೆಚ್ಚವನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಒಟ್ಟಾರೆ ಸಂಭವನೀಯ ಉಳಿತಾಯದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/1390/ವೆಚ್ಚ–5/2009 ದಿನಾಂಕ: 02–12–2009ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 2823

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು –1)

**COMMERCE AND INDUSTRIES SECRETARIAT**

**Sub:** Release of VRS amount to Karnataka State Agro Corn Products Ltd.

**Read:** 1) G.O. No. ಕೃತೋಇ 35 ಕೃಇಮಂ 2009 dt: 24-09-2009.

2) U.O. Note No. 1304 Exp-1/2009 dt. 23-11-2009 of the under Secretary to Govt. Finance Department. (Exp-I & Inv)..

**Preamble:**

The Agriculture Department vide its Govt. Order read at (1) above has sanctioned an amount of Rs. 6.72 crore as a loan towards payment of VRS amount to 121 employees of Karnataka State Agro Corn Products Ltd. Under Head of Account 6852-02-190-4-02-394 (NP).

In the U.O. Note read at (2) above, the Finance Department has informed that under the demand No. 18 (C&I) Commerce & Industries Department will have to issue the Government Order to authorize the Commissioner for Industrial Development and Director of industries & Commerce to Countersign the bill Submitted by Karnataka State Agro Corn Products Ltd.

Hence the Following order.

**Order No.CI 305 SPI 2009, Bangalore Dated: 10th December 2009**

In the Circumstances explained above, Commissioner for industrial Development and Director of Industries & Commerce is hereby authorized to countersign the bill/payee's receipt amounting to Rs. 6.72 Crore (Six crore and Seventy two lakhs only) submitted by the Managing Director, Karnataka State Agro Corn Products Ltd. The expenditure is debitable to Head of Account 6852-02-190-4-02-394 (NP) The release of loan is subject to the Conditions imposed in the Govt. Order No. ಕೃತೋಇ 35 ಕೃಇಮಂ 2009 dt: 24-09-2009

This Issues with the Concurrence of Finance Department vide U.O. Note No. FD 1304 Exp-I/2009 dated: 23-11-2009.

By Order and in the name of the Governor of Karnataka

**APARNA PAVATE**

Desk Officer (Technical Cell)

Commerce & Industries Department.

P.R. 2824

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಿಗೆ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತದ ಮೇಲೆ ಬಡ್ಡಿಯನ್ನು ಬಿಡುಗಡೆ ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ:ಸಿಆಸುಇ 60 ಸೇಉನ್ಯಾ 2007, ಬೆಂಗಳೂರು, ದಿನಾಂಕ: 4–12–2008.

2) ಮಹಾಲೇಖಾಪಾಲರ ಪತ್ರ ಸಂ:ಪಿಎಮ್/ಜಿ1/ಡಬ್ಲ್ಯೂಪಿ–ಎನ್ಎಸ್ವಿ/2008–09/913, ದಿನಾಂಕ: 27.02.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಾರ್ ಕೌನ್ಸಿಲ್‌ನಿಂದ ಉಚ್ಚ ನ್ಯಾಯಾಲಯಕ್ಕೆ ನೇರವಾಗಿ ಆಯ್ಕೆಗೊಂಡು ನೇಮಕಗೊಂಡ ನ್ಯಾಯಾಧೀಶರಿಗೆ ನೀಡುತ್ತಿರುವ ಮಾದರಿಯಲ್ಲಿಯೇ ಅಧೀನ ನ್ಯಾಯಾಂಗ ಸೇವೆಯಿಂದ ಉಚ್ಚ ನ್ಯಾಯಾಲಯಕ್ಕೆ ಬಡ್ತಿ ಹೊಂದಿ ನೇಮಕವಾದ ನ್ಯಾಯಾಧೀಶರುಗಳಿಗೆ ಸಹ ಅಪವಾದಾತ್ಮಕ ಪ್ರಕರಣವೆಂದು ಪರಿಗಣಿಸಿ ನಿವೃತ್ತಿ ಉಪದಾನ (ಡಿ.ಸಿ.ಆರ್.ಜಿ) ಗರಿಷ್ಠ ರೂ. 3.50 ಲಕ್ಷಗಳಿಗೆ ನಿಗಧಿಪಡಿಸಲಾಗಿತ್ತು. ಹಾಗೂ ರಿಟ್ ಅರ್ಜಿ ಸಂ:11805/2007 ರಲ್ಲಿನ 13 ಅರ್ಜಿದಾರರು ಹಾಗೂ 3 ಮಂದಿ ನಿಧನ ಹೊಂದಿದ ನ್ಯಾಯಾಧೀಶರ ಕುಟುಂಬದ ಸದಸ್ಯರಿಗೆ ದಿನಾಂಕ: 04–08–2008ರ ಆದೇಶದಲ್ಲಿ ನ್ಯಾಯಾಲಯವು ನಿರ್ದೇಶಿಸಿರುವಂತೆ ಪಾವತಿಸಬೇಕಾದ ನಿವೃತ್ತಿ ಉಪದಾನದ ಮೇಲಿನ ಬಡ್ಡಿಯನ್ನು ಸಹ ಪಾವತಿಸಲು ಆದೇಶಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ: 27–02–2009ರ ಮಹಾಲೇಖಪಾಲರ ಪತ್ರದಲ್ಲಿ ಸರ್ಕಾರದ ಆದೇಶದ ಸಂ:ಸಿಆಸುಇ 60 ಸೇಉನ್ಯಾ 2009, ದಿನಾಂಕ: 4–12–2009ರಲ್ಲಿ

ಆದೇಶಿಸಿರುವಂತೆ 13 ಅರ್ಜಿದಾರರು ಹಾಗೂ ನಿಧನ ಹೊಂದಿದ ನ್ಯಾಯಾಧೀಶರ ಕುಟುಂಬದ ಮೂವರು ಸದಸ್ಯರಿಗೆ ತಲಾ ರೂ. 1.00 ಲಕ್ಷ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತವನ್ನು ದಿನಾಂಕ: 19–12–2008ರಂದು ಪಾವತಿಸಿರುವುದಾಗಿ ತಿಳಿಸಿ, ಅವರುಗಳಿಗೆ ತೀರ್ಪಿನ ದಿನಾಂಕದಿಂದ 60 ದಿನಗಳ ಮೇಲ್ಪಟ್ಟ ದಿನದಿಂದ ವಾಸ್ತವವಾಗಿ ಪಾವತಿಸಿದ ದಿನಾಂಕದವರೆಗೆ ಬಡ್ಡಿಯನ್ನು ಪಾವತಿಸಲು ಸೂಕ್ತವಾದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂ:ಸಿಆಸುಇ 19 ಸೇಉನ್ಯಾ 2009, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2009**

ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರುಗಳಿಗೆ ರಿಟ್ ಅರ್ಜಿ ಸಂ: 11805/2007ರ ತೀರ್ಪಿನನ್ವಯ ನಿವೃತ್ತಿ ಉಪದಾನದ ವ್ಯತ್ಯಾಸದ ಮೊತ್ತದ ಮೇಲೆ ಈ ಕೆಳಕಂಡಂತೆ ಬಡ್ಡಿಯನ್ನು ಪಾವತಿಸಲು ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ನಿವೃತ್ತ ನ್ಯಾಯಾಧೀಶರ ಹೆಸರು | ವ್ಯತ್ಯಾಸದ ಮೊತ್ತವನ್ನು ಪಾವತಿಸಿದ ದಿನಾಂಕ | ಪಾವತಿಸಬೇಕಾದ ಮೊತ್ತ |
|---|---|---|---|
| 1 | ಶ್ರೀ ಜಿ. ಪತ್ರಿ ಬಸವನಗೌಡ | 19–12–2008 | 2097.00 |
| 2 | ಶ್ರೀ ಎಸ್. ವೆಂಕಟರಾಮನ್ | 19–12–2008 | 2097.00 |
| 3 | ಶ್ರೀ ಎಮ್.ಬಿ. ವಿಶ್ವನಾಥ್ | 19–12–2008 | 2097.00 |
| 4 | ಶ್ರೀ ಬಿ.ಎನ್. ಮಲ್ಲಿಕಾರ್ಜುನ | 19–12–2008 | 2097.00 |
| 5 | ಶ್ರೀ ಎಸ್.ಬಿ. ಮಜಿಗೆ | 19–12–2008 | 2097.00 |
| 6 | ಶ್ರೀ ಕೆ.ಆರ್. ಪ್ರಸಾದ್ ರಾವ್ | 19–12–2008 | 2097.00 |
| 7 | ಶ್ರೀ ಎನ್.ಎಸ್. ವೀರಭದ್ರಯ್ಯ | 19–12–2008 | 2097.00 |
| 8 | ಶ್ರೀ ಸಿ.ಎನ್.ಎ. ರಾವ್ | 19–12–2008 | 2097.00 |
| 9 | ಶ್ರೀ ಬಿ.ಎಸ್. ಶ್ರೀನಿವಾಸ ರಾವ್ | 19–12–2008 | 2097.00 |
| 10 | ಶ್ರೀ ಎಸ್.ಆರ್. ವೆಂಕಟೇಶಮೂರ್ತಿ | 19–12–2008 | 2097.00 |
| 11 | ಶ್ರೀ ಎಮ್.ಎಮ್. ಮಿರ್ದೆ | 19–12–2008 | 2097.00 |
| 12 | ಶ್ರೀ ಎ.ಬಿ. ಮುರ್‌ಗೋಡ್ | 19–12–2008 | 2097.00 |
| 13 | ಶ್ರೀ ಆರ್. ರಾಮಕೃಷ್ಣ | 19–12–2008 | 2097.00 |
| 14 | ಶ್ರೀಮತಿ ಪಾರ್ವತಿ ಸಾಂಗ್ಲದ್<br>W/o Late B.K. Sangalad | 19–12–2008 | |
| 15 | ಶ್ರೀ ಅರವಿಂದ ಸಾಂಗ್ಲದ್<br>S/o Late B.K. Sangalad | 19–12–2009 | 2097.00 |
| 16 | ಶ್ರೀ ಅನಂತ ಪದ್ಮನಾಭ ಸಾಂಗ್ಲದ್<br>S/o Late B.K. Sangalad | 19–12–2009 | |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2071–01–104–2–06– Interest on belated Payment of DCRG (Charged) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಟಿಪ್ಪಣಿ ಸಂ:ಆಇ(ವಿ) 178 ಪಿಇಎನ್–1/2009, ದಿನಾಂಕ: 19–08–2009 ರನ್ವಯ ಆರ್ಥಿಕ ಇಲಾಖೆಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 2825

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**FINANCE SECRETARIAT**

**Sub:** Chief Minister's Relief Fund Rules 1958-revision of-regarding.

**Read:** 1) Govt.Order No. FD 103 ACP 58 dated: 3-12-1958.
2) Govt.Order No. FD 35 BMS 78 dated: 12-9-1978.
3) Corrigendum No. FD 35 BMS 78 dated: 23-9-1978.
4) Govt.Order No. FD 35 BMS 78 dated: 4-11-1980.
5) Govt.Order No. FD 8 BMS 2007 dated: 29-10-2007.
6) Govt.Order No. FD 23 TAR 2009 dated: 07-10-2009.

**Preamble:**

In the Govt. Order read at (1) above, sanction has been accorded for constitution of 'Chief Minister's Relief Fund, As per the Chief Minister's Relief Fund Rules Prescribed vide Govt. Order read at (2) above, Contributions received from the public and Government Should be kept in P.D. Account to be operated by the Secretary to Chief Minister or an officer authorized by him. The Fund Collected is required to be utilized for the relief of Distress of persons at the discretion of the chief Minister. Additional instructions have also been issued in Govt. Orders read at (3), (4) and (5) above for operation of the above fund.

The "Calamity Relief Fund of Karnataka" has been opened under the head of account "8235-00-111-0-02 public Contribution to the Calamity Relief" to collect donations and Contributions received from public for Calamity Relief. In Govt. Order dated:7-10-2009 read at (6) above, it has been Clarified that the "Calamity Relief Fund of Karnataka" is administered and forms the part of the Chief Minister's Relief Fund. Inview of this Clarification it is found necessary to partially modify the existing chief Minister's Relief Fund Rules and hence this order.

**Govt. Order No.FD 23 TAR 2009, Bangalore, Dated: 5th December 2009**

1. The Chief Minister's Relief Fund Shall be under overall control of Chief Secretary to Govt.
2. The Contributions received for the Chief Minister's Relief Fund towards Calamity relief and the contributions received for the Chief Minister's Relief Fund towards relief of distress of Persons shall be kept Separately as per the procedure prescribed in Govt. Orders No. (i) FD 23 TAR 2009 dated: 29-09-2009 and (ii) FD 35 BMS 78 dated: 12-9-1978 respectively.
3. The Contributions received for the Chief Minister's Relief Fund towards Calamity relief shall be regulated as follows
   (i) The Secretary to Govt. (Disaster Management) Revenue Department is designated as the nodal officer for managing the receipts and expenditure out of the public Contributions to the Chief Minister's Relief Fund towards Calamity Relief. The Secretary to Chief Minister is designated as the nodal officer for managing the receipts and expenditure out of the Public contributions to the Chief Minister's Relief Fund towards relief of distress of Persons. Both these officers should assist the Chief Secretary in overall Control and Management of the Chief Minister's Relief Fund.
   (ii) The Secretary to Govt. (Disaster Management) Revenue Department may transfer funds out of "8235-00-111-0-02 public Contributions to the Calamity Relief" to the Concerned Deputy Commissioner with the approval of Chief Minister for payments to implementing agencies for services rendered or supplies made. After approval of the Chief Minister the Secretary to Govt. (Disaster Management), Revenue Department shall issue an Executive Order for transferring the funds to a Separate accounts as "public"

Contributions to the Calamity Relief Fund" below `Miscellaneous Deposit Account' of Deputy Commissioner.

(iii) The Deputy Commissioner shall draw the funds based on the Executive Order issued by the Revenue Department. The Claim shall be presented on a payee's Receipt debiting the head of account "8235-00-111-0-02 public Contributions to the Calamity Relief" and the Treasuries shall transfer the funds by means of TTR to the "Miscellaneous Deposit Account" of the Concerned Deputy Commissioner. The Deputy Commissioner have to open a Separate account as "public" Contributions to the Calamity Relief Fund" under their `Miscellaneous Deposit Account' for the purpose.

(iv) The Secretary to Govt. (Disaster Management) Revenue Department should review regularly and put up to Chief Secretary periodically the funds received and released, expenditure incurred and balance available with the Deputy Commissioners in their "Miscellaneous Deposit Accounts" the Deputy Commissioners will have to preserve the vouchers and produce them for scrutiny at the time of audit.

4. In respect of sanction, operation and maintenance of funds received for relief of distress of persons under the Chief Minister's Relief Fund, the Secretary to Chief Minister shall follow the instructions issued in Govt. Order No. FD 35 BMS 78 dated. 12-09-1978.

By Order and in the Name of the Governor of Karnataka

**C. SHAMARAO**

Under Secretary to Government

Finance Department, (FR & BCC)

P.R. 2826

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ಗ್ರೂಪ್ 'ಸಿ', ಮತ್ತು ಗ್ರೂಪ್ 'ಡಿ' ನೌಕರರ ವೃಂದ ನಿರ್ವಹಣಾ ಪ್ರಾಧಿಕಾರ ರಚನೆ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001 ದಿನಾಂಕ: 22–11–2001.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 101 ಎಸ್‌ಆರ್‌ಡಿ 98 (ಪಿ) ದಿನಾಂಕ: 1–4–2004

3) ಸರ್ಕಾರದ ಆದೇಶ ಸಂಖ್ಯೆ: ಮಮಇ 422 ಎಸ್‌ಜೆಡಿ 2004 ದಿನಾಂಕ: 1–1–2008

4) ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆರವರ ಕಛೇರಿಯ ಪತ್ರ ಸಂಖ್ಯೆ: ನಿಅಕಇ/ಸಿಬ್ಬಂದಿ/ವೃಂ.ನಿ.ಪ್ರಾ/2009–10/2360 ದಿನಾಂಕ: 01–07–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 22–11–2001ರ ಆದೇಶದಲ್ಲಿ ಸರ್ಕಾರವು ವರ್ಗಾವಣೆ ಬಗ್ಗೆ ಆದೇಶ ಹೊರಡಿಸಿ ವೃಂದ ನಿರ್ವಹಣಾ ಪ್ರಾಧಿಕಾರವನ್ನು ರಚನೆ ಬಗ್ಗೆ ಮಾರ್ಗಸೂಚಿಯನ್ನು ನೀಡಿರುತ್ತದೆ.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ: 1–4–2004ರ ಅಧಿಸೂಚನೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಬೇರ್ಪಡಿಸಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಿ ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ: 1–1–2008ರ ಆದೇಶದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿ/ನೌಕರರನ್ನು ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆಯಲ್ಲಿ ಶಾಶ್ವತವಾಗಿ ವರ್ಗಾವಣೆ ಮುಖಾಂತರ ನೇಮಕ ಮಾಡಿ ಆದೇಶ ಹೊರಡಿಸಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿ: 1–7–2009ರ ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ರವರ ಪತ್ರದಲ್ಲಿ ಅಂಗವಿಕಲ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಗೆ ವೃಂದ ನಿರ್ವಹಣಾ ಪ್ರಾಧಿಕಾರವನ್ನು ರಚಿಸುವುದು ಅವಶ್ಯಕವಾಗಿರುತ್ತದೆಂದು, ವೃಂದ ನಿರ್ವಹಣಾ ಪ್ರಾಧಿಕಾರದಲ್ಲಿ ಅಂಗವಿಕಲ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ನಿರ್ದೇಶಕರನ್ನು ಅಧ್ಯಕ್ಷರನ್ನಾಗಿ, ಉಪನಿರ್ದೇಶಕರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರು (ಆಡಳಿತ) ಇವರನ್ನು ಸದಸ್ಯರನ್ನಾಗಿ ನೇಮಿಸುವಂತೆ ಕೋರಿರುತ್ತಾರೆ.

ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ನಿರ್ದೇಶಕರು ಅಂಗವಿಕಲ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಲ್ಲಿನ ಗ್ರೂಪ್ 'ಸಿ' ಹಾಗೂ ಗ್ರೂಪ್ 'ಡಿ' ವೃಂದದ ನೌಕರರುಗಳ ವೃಂದ ನಿರ್ವಹಣಾ ಪ್ರಾಧಿಕಾರವಾಗಿರುವುದರಿಂದ ನಿರ್ದೇಶಕರ ಅಧ್ಯಕ್ಷತೆಯಲ್ಲಿ ವೃಂದ ನಿರ್ವಹಣಾ ಪ್ರಾಧಿಕಾರ ಸಮಿತಿ ರಚಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 386 ಎಸ್‌ಜೆಡಿ 2009 (2) ಬೆಂಗಳೂರು, ದಿನಾಂಕ: 30ನೇ ನವೆಂಬರ್ 2009**

ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಲ್ಲಿನ ಗ್ರೂಪ್ 'ಸಿ' ಹಾಗೂ ಗ್ರೂಪ್ 'ಡಿ' ನೌಕರರ ವೃಂದದ ನೌಕರರುಗಳ ವರ್ಗಾವಣೆಗೆ ಸಂಬಂಧಿಸಿದಂತೆ, ನೌಕರರುಗಳ ಸೂಕ್ತತೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಇಲಾಖಾ ವೃಂದ ನಿರ್ವಹಣಾ ಪ್ರಾಧಿಕಾರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ರಚಿಸಿದೆ.

| | | |
|---|---|---|
| 1. | ನಿರ್ದೇಶಕರು<br>ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ | ಅಧ್ಯಕ್ಷರು |
| 2. | ಜಂಟಿ ನಿರ್ದೇಶಕರು (ಆಡಳಿತ),<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, | ಸದಸ್ಯರು |
| 3. | ಉಪನಿರ್ದೇಶಕರು,<br>ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಪಿ.ಆರ್. 2827 ಸರ್ಕಾರದ ಅಧೀನ ಕಾರ್ಯದರ್ಶಿ –2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 460 ಮೈಅಪ್ರಾ 2009, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಯುಡಿ 120 ಟಿಟಿಪಿ 84, ದಿನಾಂಕ: 26.4.1984 ರಲ್ಲಿ ಮೈಸೂರು ನಗರದ ಸ್ಥಳೀಯ ಯೋಜನಾ ಪ್ರದೇಶವನ್ನು ಮತ್ತು ನಂಜನಗೂಡು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶವನ್ನು ಒಂದುಗೂಡಿಸಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ: ವನಇ 877 ಟಿಟಿಪಿ 87(2), ದಿನಾಂಕ: 18.8.1988 ರಲ್ಲಿ ಮೈಸೂರು ತಾಲ್ಲೂಕಿನ 33 ಗ್ರಾಮಗಳು ನಂಜನಗೂಡು ತಾಲ್ಲೂಕಿನ 5 ಗ್ರಾಮಗಳು ಮತ್ತು ಶ್ರೀರಂಗಪಟ್ಟಣದ 3 ಗ್ರಾಮಗಳನ್ನೊಳಗೊಂಡ ಸ್ಥಳೀಯ ಯೋಜನಾ ಪ್ರದೇಶವನ್ನು "Mysore-Nanjanagud ENVIRONS" ಎಂದು ಕರೆಯಲಾಗಿದೆ. ಸದರಿ ಅಧಿಸೂಚನೆಯ ಅನುಬಂಧ–I ರಲ್ಲಿ ದೇವರಸನಹಳ್ಳಿ ಗ್ರಾಮವು ಬಿಟ್ಟು ಹೋಗಿದ್ದು, ಇನ್ನು ಮುಂದೆ ಸದರಿ ದೇವರಸನಹಳ್ಳಿ ಗ್ರಾಮವನ್ನು ಅನುಬಂಧ–I ರಲ್ಲಿ ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಟಿ. ನಾರಾಯಣಸ್ವಾಮಿ**

ಪಿ.ಆರ್. 2735 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಕುಕ 353 ಪಿಟಿಡಿ 2009, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2009**

ಸರ್ಕಾರಿ ಆದೇಶ ಸಂಖ್ಯೆ: ಆಕುಕ 353 ಪಿಟಿಡಿ 2009, ದಿನಾಂಕ: 16.10.2009ರ ಆದೇಶ ಭಾಗದ 3ನೇ ಸಾಲಿನ ಮೆರಿಟ್ ಪದದ ನಂತರ "ಸರ್ಕಾರಿ ಆದೇಶ ಸಂಖ್ಯೆ: ಆಕುಕ 18 ಪಿಟಿಡಿ 2006 ದಿ:19.1.2006 ರಲ್ಲಿ ಹಾಗೂ ಸಿಸಿಐಎಂ ರೆಗ್ಯೂಲೇಷನ್ 2005 ಮತ್ತು ಕ್ಲಾಸ್ IV(4) & (5) ರಲ್ಲಿ ನಿಗದಿಪಡಿಸಿರುವ ಮೆರಿಟ್‌ನಂತೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 2743 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ).

## ಕಂದಾಯ ಸಚಿವಾಲಯ

**ವಿಷಯ :** 2009–10ನೇ ಸಾಲಿನಲ್ಲಿ ಭಾರಿ ಮಳೆ ಹಾಗೂ ಪ್ರವಾಹದ ವಿಕೋಪಗಳಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು

**ಪ್ರಸ್ತಾವನೆ:**

2009ನೇ ಸೆಪ್ಟೆಂಬರ್ ಮಾಹೆಯ ಅಂತ್ಯದಲ್ಲಿ ಹಾಗೂ ಅಕ್ಟೋಬರ್ ಮಾಹೆಯ ಮೊದಲ ವಾರದಲ್ಲಿ ರಾಜ್ಯದಲ್ಲಿ ಬಿದ್ದ ಬಾರಿ ಮಳೆಯಿಂದ ಉಂಟಾದ ಪ್ರವಾಹ ಮಾನವ ಜೀವಹಾನಿ, ಜಾನುವಾರುಹಾನಿ, ಮನೆಹಾನಿ, ಬೆಳೆಹಾನಿ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಾನಿ ಉಂಟಾಗಿದೆ. ಇಂತಹ ಹಾನಿಗೆ ಪರಿಹಾರ ಕೈಗೊಳ್ಳಲು ಹಣ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಪ್ರವಾಹ ಪೀಡಿತ ಜಿಲ್ಲೆಗಳಲ್ಲದೆ ಇತರೆ ಜಿಲ್ಲೆಗಳಲ್ಲಿ ಪ್ರಕೃತಿ ವಿಕೋಪ ಪರಿಹಾರಕ್ಕಾಗಿ ಹಣ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಕೋರಿಕೆ ಸಲ್ಲಿಸಿರುತ್ತಾರೆ. ಜಿಲ್ಲಾಧಿಕಾರಿಗಳ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಜೀವಹಾನಿ, ಬೆಳೆಹಾನಿ, ಮನೆಹಾನಿ, ಮೂಲಭೂತ ಸೌಕರ್ಯಗಳ ಹಾನಿಗೆ ತುರ್ತು ಪರಿಹಾರ ಕಾರ್ಯ ಕೈಗೊಳ್ಳಲು ಹಣ ಬಿಡುಗಡೆ ಮಾಡುವ ಅವಶ್ಯಕತೆಯಿರುವುದನ್ನು ಪರಿಗಣಿಸಿ ಸರ್ಕಾರವು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 137 ಟಿಎನ್‌ಆರ್ 2009 (1) ಬೆಂಗಳೂರು, ದಿನಾಂಕ:28ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ರೂ. 19,000–00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಬೆಂಗಳೂರು ನಗರ | 100–00 |
| 2 | ಬೆಂಗಳೂರು ಗ್ರಾಮಾಂತರ | 100–00 |
| 3 | ಬಾಗಲಕೋಟೆ | 1500–00 |
| 4 | ಬಳ್ಳಾರಿ | 1500–00 |
| 5 | ಬೆಳಗಾಂ | 1400–00 |
| 6 | ಬೀದರ್ | 300–00 |
| 7 | ಬಿಜಾಪುರ | 1500–00 |
| 8 | ಚಾಮರಾಜನಗರ | 100–00 |
| 9 | ಚಿಕ್ಕಮಗಳೂರು | 300–00 |
| 10 | ಚಿತ್ರದುರ್ಗ | 800–00 |
| 11 | ದಕ್ಷಿಣ ಕನ್ನಡ | 300–00 |
| 12 | ದಾವಣಗೆರೆ | 800–00 |
| 13 | ಧಾರವಾಡ | 800–00 |
| 14 | ಗದಗ | 1500–00 |
| 15 | ಗುಲ್ಬರ್ಗಾ | 800–00 |
| 16 | ಹಾಸನ | 300–00 |
| 17 | ಹಾವೇರಿ | 800–00 |
| 18 | ಕೊಡಗು | 100–00 |
| 19 | ಕೋಲಾರ | 300–00 |
| 20 | ಕೊಪ್ಪಳ | 1500–00 |

| ಕ್ರ.ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 21 | ಮೈಸೂರು | 300–00 |
| 22 | ರಾಯಚೂರು | 1500–00 |
| 23 | ಶಿವಮೊಗ್ಗ | 500–00 |
| 24 | ತುಮಕೂರು | 200–00 |
| 25 | ಉಡುಪಿ | 200–00 |
| 26 | ಉತ್ತರ ಕನ್ನಡ | 800–00 |
| 27 | ರಾಮನಗರ | 300–00 |
| 28 | ಚಿಕ್ಕಬಳ್ಳಾಪುರ | 300–00 |
| 29 | ಮಂಡ್ಯ | 100–00 |
| | ಒಟ್ಟು ರೂ. | 19000–00 |

(ರೂ. ಹತ್ತೊಂಬತ್ತು ಸಾವಿರ ಲಕ್ಷಗಳು ಮಾತ್ರ)

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.

a) ಮಾನವ /ಪ್ರಾಣಿ ಜೀವಹಾನಿ

b) ಮನೆ ಹಾನಿ

c) ಬೆಳೆಹಾನಿ

d) ಹಾನಿಗೊಳಗಾದ ಮೂಲಭೂತ ಸೌಕರ್ಯಗಳಿಗೆ ತುರ್ತು ರಿಪೇರಿ

e) ಕುಡಿಯುವ ನೀರಿನ ವ್ಯವಸ್ಥೆ

f) ಸಂಕ್ರಾಮಿಕ ರೋಗ ತಡೆಗಟ್ಟಲು ಹಾಗೂ ನೈರ್ಮಲೀಕರಣಕ್ಕೆ

g) ಜಾನುವಾರುಗಳ ಸಂರಕ್ಷಣೆ

2) ಕೇಂದ್ರ ಸರ್ಕಾರವು ಹೊರಡಿಸಿರುವ ಸಿಆರ್‌ಎಫ್/ಎನ್‌ಸಿಸಿಎಫ್ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್ ಎಫ್/.ಎನ್ ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು. ಈ ಷರತ್ತು ಪ್ರವಾಹ ಪೀಡಿತ ಜಿಲ್ಲೆಗಳಲ್ಲಿ ಸಿಆರ್‌ಎಫ್/ಎನ್‌ಸಿಸಿಎಫ್ ನಾರ್ಮ್ಸ್ ಪ್ರಕಾರ 30 ದಿವಸ ಹಾಗೂ 45 ದಿವಸಗಳಲ್ಲಿ ಕೈಗೊಳ್ಳುವ ಕಾಮಗಾರಿಗಳಿಗೆ ಅನ್ವಯಿಸುವುದಿಲ್ಲ.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ /ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 692 ವೆಚ್ಚ–7/2009 ದಿನಾಂಕ:24.10.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ದೇಸಾಯಿ**

ಪಿ.ಆರ್. 2505

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

**ವಿಷಯ :** ಅಗ್ನಿ ದುರಂತ, ಪ್ರವಾಹ ದುರಂತಗಳಲ್ಲಿ ಹಾಗೂ ಇತರ ಪ್ರಕೃತಿ ವಿಕೋಪ ದುರಂತಗಳಲ್ಲಿ ಶೋಧನೆ ಹಾಗೂ ರಕ್ಷಣಾ ಕಾರ್ಯಗಳನ್ನು ನಿರ್ವಹಿಸಲು ಸಿಆರ್‌ಎಫ್/ಎನ್‌ಸಿಸಿಎಫ್ ನಿಧಿಯಿಂದ ಬೇಕಾದ ಉಪಕರಣಗಳ ಖರೀದಿಗೆ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 240 ಟಿಎನ್‌ಆರ್ 2004 ದಿನಾಂಕ:24.11.2005 ಹಾಗೂ ಆದೇಶ ಸಂ:ಆರ್ ಡಿ 99 ಟಿಎನ್‌ಆರ್ 2008 ದಿನಾಂಕ:24.1.2009.

**ಪ್ರಸ್ತಾವನೆ:**

ಉಲ್ಲೇಖಿತ ಸರ್ಕಾರದ ಆದೇಶಗಳಲ್ಲಿ ಈಗಾಗಲೇ ಕ್ರಮವಾಗಿ ರೂ. 3 ಕೋಟಿ ಹಾಗೂ ರೂ. 2.91 ಕೋಟಿಗಳ ಅನುದಾವನ್ನು ಶೋಧನ ಹಾಗೂ ರಕ್ಷಣಾ ಕಾರ್ಯಗಳ ನಿರ್ವಹಣೆಗೆ ಬೇಕಾದ ಉಪಕರಣಗಳನ್ನು ಖರೀದಿಸಲು, ಅಗ್ನಿಶಾಮಕ ಹಾಗೂ ತುರ್ತು ಸೇವೆಗಳ ಇಲಾಖೆಗೆ ಬಿಡುಗಡೆ ಮಾಡಲಾಗಿತ್ತು. ಪ್ರಸ್ತುತ 2009–10ನೇ ಸಾಲಿನಲ್ಲಿ ಬಿದ್ದ ಭಾರಿ ಮಳೆಯಿಂದ ಉಂಟಾದ ಅಗ್ನಿದುರಂತ, ಪ್ರವಾಹ ದುರಂತಗಳಲ್ಲಿ ಹಾಗೂ ಇತರ ಪ್ರಕೃತಿ ವಿಕೋಪ ದುರಂತಗಳಲ್ಲಿ ಶೋಧನೆ ಹಾಗೂ ರಕ್ಷಣಾ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಲು ಅಗತ್ಯವಾದ ಸಾಮಗ್ರಿಗಳನ್ನು ಖರೀದಿಸಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೂ. 10.00ಕೋಟಿ ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರ ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 137 ಟಿಎನ್‌ಆರ್ 2009 (3), ಬೆಂಗಳೂರು, ದಿನಾಂಕ:28ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರವಾಹ, ಹಾಗೂ ಅಗ್ನಿದುರಂತಗಳಲ್ಲಿ ಹಾಗೂ ಇತರೆ ಪ್ರಕೃತಿ ವಿಕೋಪ ದುರಂತಗಳಲ್ಲಿ ಶೋಧನೆ, ರಕ್ಷಣಾ ಸಾಮಗ್ರಿಗಳು ಹಾಗೂ ರಕ್ಷಣಾ ವಾಹನಗಳು ಮುಂತಾದ ಅವಶ್ಯಕ ಸಾಮಗ್ರಿಗಳನ್ನು ಖರೀದಿಸಲು ರೂ. 10 ಕೋಟಿಗಳು (ರೂ. ಹತ್ತು ಕೋಟಿಗಳು ಮಾತ್ರ) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ, ಬೆಂಗಳೂರು, ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ, ಬೆಂಗಳೂರು. ಇವರು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಸರ್ಕಾರದ ಕಾರ್ಯದರ್ಶಿಗಳು, (ವಿಪತ್ತು ನಿರ್ವಹಣೆ) ಕಂದಾಯ ಇಲಾಖೆ, ಇವರಿಂದ ಮೇಲು ರುಜು ಪಡೆದು ಖಜಾನೆಯಿಂದ ಹಣ ಡ್ರಾ ಮಾಡಿ ಸಾಮಗ್ರಿಗಳ ಖರೀದಿಗೆ ಉಪಯೋಗಿಸತಕ್ಕದ್ದು.

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಉಪಯೋಗಿಸುವುದು.

2) ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದಕ್ಕೆ ಮಾತ್ರ ಬಳಸತಕ್ಕದ್ದು.

3) ಈ ಅನುದಾನವನ್ನು ವೆಚ್ಚ ಮಾಡಿದಕ್ಕೆ ಹಣ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

4) ಈ ಅನುದಾನವನ್ನು ಪ್ರಕೃತಿ ವಿಕೋಪ ಮಾರ್ಗಸೂಚಿಗಳನ್ವಯ ವಿನಿಯೋಗಿಸುವುದು

5) ಸಾಮಗ್ರಿಗಳನ್ನು ಖರೀದಿಸುವಾಗ ಸರ್ಕಾರವು ಹೊರಡಿಸಿರುವ ಆದೇಶಗಳ ಹಾಗೂ ಸುತ್ತೋಲೆಗಳಲ್ಲಿ ನೀಡಿರುವ ನಿಯಮಗಳನ್ನು ಹಾಗೂ ಆರ್ಥಿಕ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದು.

ಮೇಲೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 692 ವೆಚ್ಚ–7/2009 ದಿನಾಂಕ:24.10.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 2507

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

**ವಿಷಯ :** 2009–10ನೇ ಸಾಲಿನಲ್ಲಿ ಭಾರಿ ಮಳೆಯಿಂದ ವಿದ್ಯುತ್ ಪ್ರಸರಣ ನಿಗಮಕ್ಕೆ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕೆಪಿಟಿಸಿಎಲ್, ಇವರಿಂದ ಬಂದಿರುವ ಬೇಡಿಕೆ ಪತ್ರ.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಬಿದ್ದ ಬಾರಿ ಮಳೆಯಿಂದ ರಾಜ್ಯದಲ್ಲಿ ವಿದ್ಯುತ್ ಪ್ರಸರಣ ನಿಗಮಕ್ಕೆ ಉಂಟಾಗಿರುವ ಹಾನಿಗಳಿಗೆ ತುರ್ತು ಪರಿಹಾರ ಕಾರ್ಯಕೈಗೊಳ್ಳಲು ಮೇಲೆ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕೆಪಿಟಿಸಿಎಲ್,

ಮೇರೆಗೆ ಪೂರ್ವಭಾವಿ ವಿಚಾರಣೆ ನಡೆಸಿದ್ದು, ತದನಂತರ ಜಂಟಿ ಇಲಾಖಾ ವಿಚಾರಣೆಯನ್ನು ಕಾನೂನಿನನ್ವಯ ಎ.ಡಿ.ಜಿ.ಪಿ (ಅಪರಾಧ ಮತ್ತು ತಾಂತ್ರಿಕ ಸೇವೆಗಳು) ರವರಿಂದ ನಡೆಸಲಾಗಿರುತ್ತದೆ. ಮುಂದುವರೆದು, ಶಾಲೆಯ ಅಭಿವೃದ್ಧಿ ಕಾರ್ಯಕ್ಕಾಗಿ ಸರ್ಕಾರದಿಂದ ಹಣ ಮಂಜೂರು ಮಾಡಿಸಿಕೊಳ್ಳಬಹುದಾಗಿತ್ತು. ಪ್ರತಿಯೊಬ್ಬ ಪ್ರಶಿಕ್ಷಣಾರ್ಥಿಯಿಂದ ಪ್ರತಿ ತಿಂಗಳೂ ಮಾಮೂಲು ಹಣ ರೂ. 400/–ಗಳು ರಜೆಯ ಮೇಲೆ ತೆರಳಲು ರೂ. 200/– ಮತ್ತು ಮಧ್ಯಂತರ ರಜೆಗಾಗಿ ರೂ. 300/–ಗಳನ್ನು ಸಂಗ್ರಹಿಸಿರುವುದಾಗಿ ಸಾಕ್ಷಿಗಳ ಹೇಳಿಕೆಗಳಿಂದ ಸಾಬೀತಾಗಿದ್ದು, ಸದರಿ ವಸೂಲಾತಿಯನ್ನು ಪ್ರಾಂಶುಪಾಲರಾಗಿ, ತಡೆಯಬಹುದಾಗಿತ್ತು ಮತ್ತು ಸದರಿ ವಸೂಲಾತಿಯ ಬಗ್ಗೆ ಮೇಲಾಧಿಕಾರಿಗಳಿಗೆ ವರದಿ ಮಾಡಬಹುದಾಗಿತ್ತು. ಆದರೆ ಅವರು ಹಾಗೆ ಮಾಡಿರುವುದಿಲ್ಲ. ಅಂತೆಯೇ ಇವರು ಶಿಸ್ತಿನ ಇಲಾಖೆಯಾದ ಪೊಲೀಸ್ ಇಲಾಖೆಗೆ ಸಂಬಂಧಪಟ್ಟ ತರಬೇತಿ ಶಾಲೆಯಲ್ಲಿ **"ಪೊಲೀಸ್ ತರಬೇತಿ ಸಿಬ್ಬಂದಿಯಿಂದಲೇ ಸುಲಿಗೆ"** ಎಂಬ ಶೀರ್ಷಿಕೆ ಅಡಿಯಲ್ಲಿ ಪತ್ರಿಕೆಯಲ್ಲಿ ಸುದ್ದಿ ಪ್ರಕಟವಾಗಲು ಕಾರಣರಾಗಿರುತ್ತಾರೆ. ಇದರಿಂದ ಪೊಲೀಸ್ ಇಲಾಖೆಗೆ ಅಪಖ್ಯಾತಿ ಉಂಟುಮಾಡುವ ರೀತಿಯಲ್ಲಿ ವರ್ತಿಸಿರುವ ಹಿನ್ನಲೆಯಲ್ಲಿ, ಇವರನ್ನು ಆರೋಪ ಮುಕ್ತಗೊಳಿಸಲು ಯಾವುದೇ ಸಮರ್ಥನೆ ಇರುವುದಿಲ್ಲ.

6) ಕೆ.ಎ.ಟಿ. ಅರ್ಜಿ ಸಂಖ್ಯೆ 4510/2007 c/w 4528 ಮತ್ತು 4550/2007ರಲ್ಲಿ ನೀಡಿದ ತೀರ್ಪು ದಿನಾಂಕ:14.10.2008 ಮತ್ತು ಅರ್ಜಿ ಸಂಖ್ಯೆ 5840 ಮತ್ತು 5841/2008ರಲ್ಲಿ ದಿನಾಂಕ:20.8.2009 ರಂದು ನೀಡಿದ ತೀರ್ಪಿನಲ್ಲಿ ಆದೇಶಿಸಿರುವಂತೆ, ಪ್ರಕರಣದ ಆರೋಪಿತರ ಸಮಜಾಯಿಷಿಗಳನ್ನು ಮೇಲಿನಂತೆ ಪರಿಶೀಲಿಸಿದ್ದು, ಇವರುಗಳು ಸಮಜಾಯಿಷಿಯಲ್ಲಿ ವಾದಿಸಿರುವ ಅಂಶಗಳನ್ನು ಒಪ್ಪಲು ಸಾಧ್ಯವಿರುವುದಿಲ್ಲ ಮತ್ತು ಸದರಿ ಸಮಜಾಯಿಷಿಗಳಲ್ಲಿ ಪರಿಗಣಿಸಬಹುದಾದ ಹೊಸ ಅಂಶಗಳು ಯಾವುದೂ ಇರುವುದಿಲ್ಲ., ದಿನಾಂಕ:12.5.2003ರ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪ್ರಕಟವಾದ **"ಪೊಲೀಸ್ ತರಬೇತಿ ಸಿಬ್ಬಂದಿಯಿಂದಲೇ ಸುಲಿಗೆ"** ವಿಷಯದ ಬಗ್ಗೆ ವಿಚಾರಣೆ ನಡೆಸಿ ಆ ವೇಳೆಯಲ್ಲಿ ಸಾಕ್ಷಿದಾರರ ಹೇಳಿಕೆ ದಾಖಲಾತಿಗಳಿಂದ ಮತ್ತು ಶಿಕ್ಷಣಾರ್ಥಿಗಳು ತಮ್ಮ ಡೈರಿಗಳಲ್ಲಿ ನಮೂದಿಸಿರುವ ಅಂಶಗಳಿಂದ ಶಾಲೆಯ ಸಿಬ್ಬಂದಿಯವರು ಮೆಸ್ ಮುಂಗಡವಾಗಿ ರೂ. 1200/–ಅಲ್ಲದೆ ವಿವಿಧ ಉದ್ದೇಶಗಳಿಗೆ ಅಂದರೆ, ಮಾಮೂಲು ರೂ. 400/– ರಜೆ ಮೇಲೆ ಹೋದರೆ ರೂ. 200/–ಮತ್ತು ಮಧ್ಯಂತರ ರಜೆಗಾಗಿ ರೂ. 300/–ಗಳನ್ನು ಹಾಗೂ ವಾರ್ಷಿಕ ಕ್ರೀಡಾಕೂಟ ಮತ್ತು ಹೊಸ ವರ್ಷ ಆಚರಣೆಗೆ ರೂ. 150/–ಗಳನ್ನು ಸಂಗ್ರಹಿಸಿರುವುದು ಸ್ಥಿರಪಟ್ಟಿರುವುದಾಗಿ ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ವಿಚಾರಣೆಯಲ್ಲಿ ಎಲ್ಲಾ ತುಕಡಿಗಳ ಮುಖಂಡರ ಹೇಳಿಕೆಗಳನ್ನು ಪಡೆಯಲಾಗಿದ್ದು, ಸದರಿ ಮುಖಂಡರು ಹಣ ವಸೂಲು ಮಾಡಿ ಶ್ರೀ ದಳವಾಯಿ ಹಾಗೂ ಹಾದಿಮನಿಯವರಿಗೆ ನೀಡಿರುವುದನ್ನು ಒಪ್ಪಿಕೊಂಡಿರುತ್ತಾರೆ. ಆರೋಪಿತ ಅಧಿಕಾರಿಗಳು ಸ್ವತಃ ಹಣ ವಸೂಲು ಮಾಡುತ್ತಿದ್ದುದನ್ನು ವಿಚಾರಣೆಯಲ್ಲಿ ಒಪ್ಪಿಕೊಂಡಿರುತ್ತಾರೆ. ಲೆಕ್ಕಪತ್ರ ನಿರ್ವಹಿಸಿರುತ್ತಾರೆ ಆದರೆ ಸದರಿ ಆಯಾ ವಸ್ತು ಖರೀದಿಗೆ ಖರ್ಚು ಮಾಡಿರುವುದಕ್ಕೆ ವೋಚರ್ ಅಥವಾ ರಸೀತಿಯನ್ನು ಇಟ್ಟಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ ಈ ಕಾರಣಗಳಿಂದ ಆರೋಪಿತರ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವ ಕಾರಣ ಆರೋಪಿತರು ತಮ್ಮ ಸಮಜಾಯಿಷಿಗಳಲ್ಲಿ ಹೇಳಿರುವ ಅಂಶಗಳನ್ನು ಒಪ್ಪಲು ಸಾಧ್ಯವಿರುವುದಿಲ್ಲ ಮತ್ತು ಆರೋಪಿತರು ಕೋರಿರುವಂತೆ ಅವರನ್ನು ದೋಷಮುಕ್ತರನ್ನಾಗಿ ಮಾಡಲು ಆಸ್ಪದವಿರುವುದಿಲ್ಲ.

7) ಉಲ್ಲೇಖ (6) ರಲ್ಲಿನ ದಿನಾಂಕ:19.6.2009ರ ಆದೇಶದನ್ವಯ ಇಲಾಖಾ ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗಿರದ ಹಿನ್ನಲೆಯಲ್ಲಿ ಈ ಕೆಳಕಂಡ ಸಿಬ್ಬಂದಿಗಳನ್ನು ಆರೋಪಗಳಿಂದ ದೋಷಮುಕ್ತಗೊಳಿಸಿದೆ ಹಾಗೂ ಇವರುಗಳ ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಲಾಗಿದೆ.

1) ಶ್ರೀ ಹೆಚ್.ಆರ್. ಚಿನ್ನಣ್ಣನವರ್, ಎ.ಹೆಚ್.ಸಿ.

2) ಶ್ರೀ ಶ್ರೀಕಾಂತ ವಿ. ಬಾಧಿ, ಎ.ಹೆಚ್.ಸಿ

3) ಶ್ರೀ ಆರ್. ಕೆ. ನಾವಿ, ಎ.ಹೆಚ್.ಸಿ.

4) ಶ್ರೀ ಜಿ.ಕೆ. ಠಾಕೂರ್, ಎ.ಹೆಚ್.ಸಿ

8) ಕೆ.ಎ.ಟಿ. ಅರ್ಜಿ ಸಂಖ್ಯೆ 4510/2007 ರೆ/ವಿ 4528 ಮತ್ತು 4550/2007 ರಲ್ಲಿ ದಿನಾಂಕ:14.10.2008 ರಂದು ಹಾಗೂ ಅರ್ಜಿ ಸಂಖ್ಯೆ:5840 ಮತ್ತು 5841/2008 ರಲ್ಲಿ ದಿನಾಂಕ:20.8.2009ರಂದು ನೀಡಿದ ತೀರ್ಪಿನಲ್ಲಿ ಆದೇಶಿಸಿರುವಂತೆ ಐವರು ಆಪಾದಿತರುಗಳ ಸಮಜಾಯಿಷಿಗಳನ್ನು ಪರಿಶೀಲಿಸಿ ಪರಿಗಣಿಸಲಾಗಿದೆ. ಹಾಗೂ ಸದರಿ ಸಮಜಾಯಿಷಿಗಳನ್ನು ಏಕೆ ಒಪ್ಪಿಕೊಳ್ಳಲು ಸಾಧ್ಯವಿಲ್ಲವೆಂದು ಪ್ರಸ್ತಾವನೆಯಲ್ಲಿ ಹೇಳಲಾಗಿರುವುದರಿಂದ ಮತ್ತು ವಿಚಾರಣಾ ವರದಿಯಲ್ಲಿ ಆರೋಪಗಳು ದೃಢಪಟ್ಟಿರುವ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಗಿನಂತೆ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 449 ಪೊಸಿಪ 2009, ಬೆಂಗಳೂರು, ದಿನಾಂಕ:22ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ:4510/07, 4528/07 ಮತ್ತು 4550/07 ರಲ್ಲಿ ದಿನಾಂಕ:14.10.2008 ರಂದು ಹಾಗೂ ಅರ್ಜಿ ಸಂಖ್ಯೆ:5840/08 ಮತ್ತು 5841/08 ರಲ್ಲಿ ದಿನಾಂಕ:20.8.2009ರಂದು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡಿರುವ ಆದೇಶದಂತೆ ಆಪಾದಿತರಾದ ಐವರು ಅಧಿಕಾರಿಗಳ ಸಮಜಾಯಿಷಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಇವರ ಸಮಜಾಯಿಷಿಯಲ್ಲಿನ ಅಂಶಗಳನ್ನು ತಳ್ಳಿಹಾಕಲಾಗಿದೆ ಮತ್ತು ಆರೋಪಿತ ಅಧಿಕಾರಿಗಳ ವಿರುದ್ಧದ ಆರೋಪಗಳು ದೃಢಪಟ್ಟಿರುವ ಹಿನ್ನಲೆಯಲ್ಲಿ ಈ ಕೆಳಕಂಡ ಅಧಿಕಾರಿ/ನೌಕರರನ್ನು ಕರ್ನಾಟಕ ಪೊಲೀಸ್ ಕಾಯ್ದೆ, 1963ರ ಕಲಂ 23(ಬಿ)(ii)ರನ್ವಯ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ.

1. ಶ್ರೀ ಸಿ.ಹೆಚ್. ಹುಡೇದ್ ಗೌಡರ್, ಆರ್.ಪಿ.ಐ
2. ಶ್ರೀ ಕೆ.ವಿ.ದಳವಾಯಿ, ಎ.ಆರ್.ಎಸ್.ಐ. ಮತ್ತು
3. ಶ್ರೀ ಜಿ.ಎಲ್ .ಹಾದಿಮನಿ, ಎ.ಹೆಚ್.ಸಿ.

ಮುಂದುವರೆದು, ನಿವೃತ್ತ ಆರೋಪಿತ ಅಧಿಕಾರಿಗಳಾದ ಶ್ರೀ ಬಿ.ಎನ್. ಶೆಟ್ಟಣ್ಣನವರ್, ಎಸ್.ಪಿ. (ಸಶಸ್ತ್ರ) ಹಿಂದಿನ ಪ್ರಾಂಶುಪಾಲರು, ಪಿ.ಟಿ.ಎಸ್. ಖಾನಾಪುರ ಮತ್ತು ಶ್ರೀ ಜಿ.ಎನ್. ಶಿರೂರ್, ಡಿ.ವೈ.ಎಸ್.ಪಿ (ಸಶಸ್ತ್ರ) ಹಿಂದಿನ ಉಪ ಪ್ರಾಂಶುಪಾಲರು. ಪೊಲೀಸ್ ತರಬೇತಿ ಶಾಲೆ, ಖಾನಾಪುರ ರವರಿಗೆ ಕೆ.ಸಿ.ಎಸ್.ಆರ್. ನಿಯಮ 214(1)(ಎ) ರನ್ವಯ ಇವರ ನಿವೃತ್ತಿ ವೇತನದ ಶೇ. 50% ರಷ್ಟು ನಿವೃತ್ತಿ ವೇತನವನ್ನು ಪ್ರತಿ ತಿಂಗಳೂ ಐದು ವರ್ಷಗಳ ಅವಧಿಯವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.2469

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ**

**ವಿಷಯ :** 2009–10ನೇ ಸಾಲಿಗೆ ಎಸ್ ಜಿಎಸ್ ವೈ ಒಂದನೇ ಕಂತಿನ ರಾಜ್ಯದ ಪಾಲಿನ ಉಳಿಕೆ ಅನುದಾನವನ್ನು ರಾಜ್ಯದ 29 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ :ಜೆ 12022/1/2009 ಎಸ್‌ಜಿಎಸ್‌ವೈ–I (10) ದಿನಾಂಕ:16.4.2009.
2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಎಸ್‌ಜೆವೈ 2009, ಬೆಂಗಳೂರು ದಿನಾಂಕ:20.5.2009
3) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ:ಜೆ 12022/1/2009 ಎಸ್‌ಜಿಎಸ್‌ವೈ– I (42) ದಿನಾಂಕ:7.8.2009.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಓದಲಾಗಿದೆ (1) ರಲ್ಲಿ ಒಂದನೇ ಕಂತಿನ ಭಾಗಶಃ ಅನುದಾನ ರೂ. 32,88,40,000 ಗಳನ್ನು ರಾಜ್ಯ ಎಲ್ಲಾ 29 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗಿತ್ತು. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಓದಲಾಗಿದೆ (2) ರಲ್ಲಿ ಮೊದಲನೇ ಕಂತಿನ ಅನುದಾನ ರೂ. 10,96,13,000 ಬಿಡುಗಡೆ ಮಾಡಿತ್ತು. ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಉಲ್ಲೇಖಿತ (3)ರ ಪತ್ರದಲ್ಲಿ ಒಂದನೇ ಕಂತಿನ ಉಳಿಕೆ ಅನುದಾನ ರೂ. 8,22,10,000 ಗಳನ್ನು ರಾಜ್ಯದ 29 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಿದ್ದು, ಇದರನ್ವಯ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ರೂ. 2,74,03,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದರೆ ಕೆಲವೊಂದು ಜಿಲ್ಲಾ ಪಂಚಾಯತಿಗಳಿಗೆ ರಾಜ್ಯದ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಲ್ಲಿ ಕೊರತೆಯಿರುವುದರಿಂದ, ಆಯವ್ಯಯದ ಲಭ್ಯತೆಗೆ ಅನುಸಾರ ರೂ. 2,49,07,000ಗಳನ್ನು 29 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆಗೊಳಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 7 ಎಸ್‌ಜೆವೈ 2009, ಬೆಂಗಳೂರು, ದಿನಾಂಕ:25ನೇ ಸೆಪ್ಟೆಂಬರ್, 2009**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ)ರಾಜ್ಯ ಸರ್ಕಾರದ 2009–10ನೇ ಸಾಲಿನ ಆಯವ್ಯಯದಲ್ಲಿ ಅನುದಾನದ ಲಭ್ಯತೆಗೆ ಅನುಸಾರವಾಗಿ ಮೊದಲನೇ ಕಂತಿನ ಉಳಿಕೆ ಅನುದಾನ ರೂ. 2,49,07, 000ಗಳನ್ನು (ರೂ.ಎರಡು ಕೋಟಿ ನಲವತ್ತೊಂಬತ್ತು ಲಕ್ಷದ ಏಳು ಸಾವಿರ ಮಾತ್ರ) ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವಂತೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.,

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು –01– ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್ ಗಾರ್ ಯೋಜನೆ)2009–2010ನೇ (2501–01–198–6–01)" (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್ ಪಿಎ 2003 ದಿನಾಂಕ:14.7.2005ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯಿತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ:ಗ್ರಾಅಪ 14 ಎಸ್ ಜೆವೈ 2007 ದಿನಾಂಕ:18.4.2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2009–10ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online ಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವ ಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ:ಗ್ರಾಅಪ 240 ಪಿಬಿಎಸ್ 2009 ದಿನಾಂಕ:16.9.2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಸ್ವ ಉಕಾ) ಹಾಗೂ ಪ.ನಿ.

ಸರ್ಕಾರದ ಜಂಟಿ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ,

ಅನುಬಂಧ

ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 7 ಎಸ್‌ಜೆವೈ 2009, ಬೆಂಗಳೂರು, ದಿನಾಂಕ:25.9.2009.

(ರೂ.ಗಳಲ್ಲಿ)

| ಕ್ರ.ಸಂ | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಉಳಿಕೆ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾದ ಮೊದಲನೇ ಕಂತಿನ ಉಳಿಕೆ ಅನುದಾನ | ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ನಿಗದಿ ಪಡಿಸಿದ ರಾಜ್ಯದ ಪಾಲಿನ ಅನುದಾನ | 2009–10ನೇ ಸಾಲಿನಲ್ಲಿ ಜಿಲ್ಲಾ ಪಂಚಾಯಿತಿಗಳಿಗೆ ಈವರೆವಿಗೂ ಬಿಡುಗಡೆ ಮಾಡಿದ ಅನುದಾನ | ಜಿಲ್ಲಾ ಪಂಚಾಯತಿ ಗಳಲ್ಲಿ ಲಭ್ಯವಿರುವ ಅನುದಾನ | ಆಯವ್ಯಯದ ಲಭ್ಯತೆಯಂತೆ ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಉಳಿಕೆ ಅನುದಾನ |
|---|---|---|---|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 19,39,000 | 6,46,000 | 63,00,000 | 25,87,000 | 37,13,000 | 6,46,000 |
| 2. | ಬೆಂಗಳೂರು (ಗ್ರಾ) | 402 | 0300ZZ8001 | 10,70,000 | 3,57,000 | 17,00,000 | 25,87,000 | (–) 8,87,000 | 0 |
| 3 | ಬೆಂಗಳೂರು ನಗರ | 401 | 0100ZZ8001 | 8,26,000 | 2,75,000 | 26,85,000 | 11,01,000 | 15,84,000 | 2,75,000 |
| 4 | ಬೆಳಗಾಂ | 413 | 2200ZZ0002 | 57,36,000 | 19,12,000 | 1,86,43,000 | 76,46,000 | 1,09,97,000 | 19,12,000 |
| 5 | ಬಳ್ಳಾರಿ | 418 | 3400ZZ0001 | 45,56,000 | 15,19,000 | 1,48,13,000 | 60,76,000 | 87,37,000 | 15,19,000 |
| 6 | ಬೀದರ್ | 419 | 3800ZZ5701 | 32,29,000 | 10,76,000 | 1,00,00,000 | 43,06,000 | 56,94,000 | 10,76,000 |
| 7 | ಬಿಜಾಪುರ | 414 | 2800ZZ9152 | 38,00,000 | 12,67,000 | 1,23,00,000 | 73,57,000 | 49,43,000 | 12,67,.000 |
| 8 | ಚಾಮರಾಜನಗರ | 456 | 1000ZZ0001 | 40,23,000 | 13,41,000 | 96,00,000 | 67,14,000 | 28,86,000 | 13,41,000 |
| 9 | ಚಿಕ್ಕಮಗಳೂರು | 408 | 1800ZZ0017 | 18,29,000 | 6,10,000 | 59,40,000 | 41,04,000 | 18,36,000 | 6,10,000 |
| 10 | ಚಿಕ್ಕಬಳ್ಳಾಪುರ | 453 | 0600ZZ0001 | 21,15,000 | 7,05,000 | 35,47,000 | 41,92,000 | (–) 6,45,000 | 0 |
| 11 | ಚಿತ್ರದುರ್ಗ | 403 | 1600ZZ0001 | 32,46,000 | 10,82,000 | 1,05,00,000 | 43,28,000 | 61,72,000 | 10,82,000 |
| 12 | ದಕ್ಷಿಣ ಕನ್ನಡ | 409 | 1900ZZ0047 | 17,65,000 | 5,88,000 | 57,35,000 | 27,77,000 | 29,58,000 | 5,88,000 |
| 13 | ದಾವಣಗೆರೆ | 451 | 1700ZZ0002 | 26,20,000 | 8,73,000 | 85,16,000 | 34,93,000 | 50,23,000 | 8,73,000 |
| 14 | ಧಾರವಾಡ | 415 | 2500ZZ8798 | 16,34,000 | 5,45,000 | 53,13,000 | 21,79,000 | 31,34,000 | 5,45,000 |
| 15 | ಗದಗ್ | 462 | 2600ZZ0001 | 25,95,000 | 8,65,000 | 84,32,000 | 34,59,000 | 49,73,000 | 8,65,000 |
| 16 | ಗುಲ್ಬರ್ಗಾ | 417 | 3200ZZ0003 | 47,26,000 | 15,75,000 | 1,53,57,000 | 62,99,000 | 90,58,000 | 15,75,000 |
| 17 | ಹಾಸನ | 410 | 1300ZZ0003 | 23,68,000 | 7,89,000 | 75,00,000 | 31,58,000 | 43,42,000 | 7,89,000 |
| 18 | ಹಾವೇರಿ | 463 | 2700ZZ0001 | 28,32,000 | 9,44,000 | 92,00,000 | 37,77,000 | 54,23,000 | 9,44,000 |
| 19 | ಕೊಡಗು | 411 | 1200ZZ0001 | 6,65,000 | 2,22,000 | 21,15,000 | 17,07,000 | 4,08,000 | 2,22,000 |

| ಕ್ರ.ಸಂ | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಉಳಿಕೆ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾದ ಮೊದಲನೇ ಕಂತಿನ ಉಳಿಕೆ ಅನುದಾನ | ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ನಿಗದಿ ಪಡಿಸಿದ ರಾಜ್ಯದ ಪಾಲಿನ ಅನುದಾನ | 2009–10ನೇ ಸಾಲಿನಲ್ಲಿ ಜಿಲ್ಲಾ ಪಂಚಾಯಿತಿಗಳಿಗೆ ಈವರೆವಿಗೂ ಬಿಡುಗಡೆ ಮಾಡಿದ ಅನುದಾನ | ಜಿಲ್ಲಾ ಪಂಚಾಯತಿ ಗಳಲ್ಲಿ ಲಭ್ಯವಿರುವ ಅನುದಾನ | ಆಯವ್ಯಯದ ಲಭ್ಯತೆಯಂತೆ ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಉಳಿಕೆ ಅನುದಾನ |
|---|---|---|---|---|---|---|---|---|---|
| 20 | ಕೋಲಾರ | 404 | 0700ZZ8002 | 23,88,000 | 7,96,000 | 45,60,000 | 59,50,000 | (–) 1,39,000 | 0 |
| 21 | ಕೊಪ್ಪಳ | 466 | 1500ZZ0010 | 40,76,000 | 13,59,000 | 1,32,00,000 | 80,19,000 | 51,81,000 | 13,59,000 |
| 22 | ಮಂಡ್ಯ | 412 | 1100ZZ0001 | 30,83,000 | 10,28,000 | 1,00,00,000 | 70,11,000 | 29,89,000 | 10,28,000 |
| 23 | ಮೈಸೂರು | 407 | 0900ZZ0001 | 37,57,000 | 12,52,000 | 1,22,00,000 | 50,10,000 | 71,90,000 | 12,52,000 |
| 24 | ರಾಯಚೂರು | 420 | 3600ZZ0001 | 38,38,000 | 12,79,000 | 1,00,00,000 | 74,83,000 | 25,17,000 | 12,79,000 |
| 25 | ರಾಮನಗರ | 452 | 0400ZZ0001 | 19,17,000 | 6,39,000 | 17,00,000 | 25,56,000 | (–) 8,56,000 | 0 |
| 26 | ಶಿವಮೊಗ್ಗ | 405 | 1400ZZ0002 | 32,64,000 | 10,88,000 | 1,06,12,000 | 43,53,000 | 62,59,000 | 10,88,000 |
| 27 | ತುಮಕೂರು | 406 | 0800ZZ0001 | 48,41,000 | 16,14,000 | 1,57,31,000 | 85,53,000 | 71,73,000 | 16,14,000 |
| 28 | ಉಡುಪಿ | 457 | 2000ZZ0001 | 14,36,000 | 4,79,000 | 40,00,000 | 19,15,000 | 20,85,000 | 4,79,000 |
| 29 | ಉತ್ತರ ಕನ್ನಡ | 416 | 3000ZZ0080 | 20,36,000 | 6,79,000 | 66,16,000 | 45,98,000 | 20,13,000 | 6,79,000 |
| | **ಒಟ್ಟು** | | | **8,22,10,000** | **2,74,03,000** | **24,86,15,000** | **13,32,95,000** | **11,47,71,000** | **2,49,07,000** |

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಸ್ವ ಉಕಾ) ಹಾಗೂಪ.ನಿ.

ಪಿ.ಆರ್. 2305

ಸರ್ಕಾರದ ಜಂಟಿ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ,

**ಸಹಕಾರ ಸಚಿವಾಲಯ**

**ವಿಷಯ :** ರಾಜ್ಯದ ಸ್ವಸಹಾಯ ಗುಂಪುಗಳಿಗೆ ಪತ್ತಿನ ಸಹಕಾರ ಸಂಸ್ಥೆಗಳ ಮೂಲಕ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲ ನೀಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ :ಸಿಒ 68 ಸಿಎಲ್ಎಸ್ 2007, ದಿನಾಂಕ :2.6.2007.
2) ಸರ್ಕಾರಿ ಆದೇಶ ಸಂಖ್ಯೆ :ಸಿಒ 68 ಸಿಎಲ್ಎಸ್ 2007, ದಿನಾಂಕ :23.1.2008.
3) ಸರ್ಕಾರಿ ಆದೇಶ ಸಂಖ್ಯೆ :ಸಿಒ 68 ಸಿಎಲ್ಎಸ್ 2007, ದಿನಾಂಕ :27.3.2008
4) ಸರ್ಕಾರಿ ಆದೇಶ ಸಂಖ್ಯೆ :ಸಿಒ 68 ಸಿಎಲ್ಎಸ್ 2007, ದಿನಾಂಕ :5.9.2008
5) ಸರ್ಕಾರಿ ಆದೇಶ ಸಂಖ್ಯೆ :ಸಿಒ 68 ಸಿಎಲ್ಎಸ್ 2007, ದಿನಾಂಕ :25.2.2009
6) ಸರ್ಕಾರಿ ಆದೇಶ ಸಂಖ್ಯೆ :ಸಿಒ 68 ಸಿಎಲ್ಎಸ್ 2007, ದಿನಾಂಕ :19.3.2009
7) ಸರ್ಕಾರಿ ಆದೇಶ ಸಂಖ್ಯೆ :ಸಿಒ 68 ಸಿಎಲ್ಎಸ್ 2007, ದಿನಾಂಕ :25.6.2009.
8) ಸರ್ಕಾರಿ ಆದೇಶ ಸಂಖ್ಯೆ :ಸಿಒ 68 ಸಿಎಲ್ಎಸ್ 2007, ದಿನಾಂಕ :21.8.2009.
9) ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ :ಸಿಆರ್‌ಡಿ/ಕೆಎಂಇ–8/40/2007–08 ದಿನಾಂಕ2.11.2009

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2) ರ ಆದೇಶಗಳಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲಗಳನ್ನು ಕೆಲವು ಷರತ್ತುಗಳಿಗೊಳಪಟ್ಟು ಒದಗಿಸಲು ಮಂಜೂರಾತಿ ನೀಡಲಾಗಿರುತ್ತದೆ. ಮೇಲೆ ಓದಲಾದ (3)ರ ಆದೇಶದಲ್ಲಿ 2007–08ನೇ ಸಾಲಿನಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸಲು ಅನುವಾಗುವಂತೆ ಬಡ್ಡಿ ಸಹಾಯಧನದ ಬಾಬ್ತು ರೂ. 2.64. ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (4)ರ ಆದೇಶದಲ್ಲಿ 2007–08ನೇ ಸಾಲಿನಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4 ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸಿದ ಬಾಬ್ತು ಬಡ್ಡಿ ಸಹಾಯಧನದ ಮೊತ್ತ ರೂ. 510.89 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (5)ರ ಆದೇಶದಲ್ಲಿ 2007–08ನೇ ಸಾಲಿನಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4 ರ ಬಡ್ಡಿ ಇದರಲ್ಲಿ ಸಾಲಗಳನ್ನು ಒದಗಿಸಿದ ಬಾಬ್ತು ಬಡ್ಡಿ ಸಹಾಯಧನದ ಮೊತ್ತ ರೂ. 289.11ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ ಮೇಲೆ ಓದಲಾದ (6)ರ ಆದೇಶದಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4 ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸಿದ ಬಾಬ್ತು 2007–08ನೇ ಸಾಲಿಗೆ ಬಡ್ಡಿ ಸಹಾಯಧನದ ಮೊತ್ತ ರೂ. 273.71 ಲಕ್ಷಗಳು ಹಾಗೂ 2008–09ನೇ ಸಾಲಿಗೆ ಬಡ್ಡಿ ಸಹಾಯಧನದ ಮೊತ್ತ ರೂ. 0.29 ಲಕ್ಷಗಳು ಒಟ್ಟು ರೂ. 274.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (7)ರ ಆದೇಶದಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸಿದ ಬಾಬ್ತು 2007–08ನೇ ಸಾಲಿಗೆ ಸಂಬಂಧಪಟ್ಟಂತೆ ಬಡ್ಡಿ ಸಹಾಯಧನದ ಮೊತ್ತ ರೂ. 1.43 ಲಕ್ಷಗಳು ಹಾಗೂ 2008–09ನೇ ಸಾಲಿಗೆ ಸಂಬಂಧಪಟ್ಟಂತೆ ಬಡ್ಡಿ ಸಹಾಯಧನದ ಮೊತ್ತ ರೂ. 198.57 ಲಕ್ಷಗಳು ಒಟ್ಟು ರೂ.200.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (8)ರ ಆದೇಶದಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸಿದ ಬಾಬ್ತು 2008–09ನೇ ಸಾಲಿಗೆ ಸಂಬಂಧಪಟ್ಟಂತೆ ಬಡ್ಡಿ ಸಹಾಯಧನದ ಮೊತ್ತ ರೂ.200.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (9)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ಪ್ರಸ್ತುತ ರೂ. 1210.00 ಲಕ್ಷ ಕ್ಲೇಮು ಪರಿಗಣಿಸಲು ಬಾಕಿ ಇದ್ದು ಕೃಷಿ ಪತ್ತಿನ ಸಂಸ್ಥೆಗಳಿಂದ ಇನ್ನೂ ಹೆಚ್ಚಿನ ಕ್ಲೇಮು ಬರಲು ಬಾಕಿ ಇರುವ ಕಾರಣ ರೂ. 1600.00 ಲಕ್ಷಗಳ ಹೆಚ್ಚುವರಿ ಅನುದಾನ ಒದಗಿಸುವಂತೆಯೂ ಆಯವ್ಯಯ ಹಂಚಿಕೆ ರೂ. 800.00 ಲಕ್ಷಗಳ ಪೈಕಿ ಬಾಕಿ ಇರುವ ರೂ. 400.00 ಲಕ್ಷಗಳನ್ನು ಬಿಡುಗಡೆಗೊಳಿಸುವಂತೆಯೂ ಹಾಗೂ ಈ ಯೋಜನೆಯಡಿ ಹಿಂದೆ ಸಹಕಾರ ಸಂಸ್ಥೆಗಳಿಗೆ ಬಿಡುಗಡೆ ಮಾಡಿದ್ದ ಅನುದಾನದ ಪೈಕಿ ಕೆಲವು ಡಿಸಿಸಿ ಬ್ಯಾಂಕುಗಳು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಬಡ್ಡಿ ವಸೂಲಿಯಾಗಿದ್ದ ಪ್ರಕರಣಗಳಲ್ಲಿ ಹೆಚ್ಚುವರಿ ಕ್ಲೇಮು ರೂ. 6.40 ಲಕ್ಷಗಳನ್ನು ಅಪೆಕ್ಸ್ ಬ್ಯಾಂಕಿಗೆ ಜಮಾ ಮಾಡಿದ್ದು ಸದರಿ ಮೊಬಲಗು ಅಪೆಕ್ಸ್ ಬ್ಯಾಂಕಿನ ಅಮಾನತ್ ಖಾತೆಯಲ್ಲಿದ್ದು ಸದರಿ ಮೊಬಲಗನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡುವಂತೆಯೂ ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಪರಿಗಣಿಸಿ ರೂ. 200.00 ಲಕ್ಷಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಒ 68 ಸಿಎಲ್ಎಸ್ 2007, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್, 2009**

ಮೇಲೆ ವಿವರಿಸಲಾದ ಪರಿಸ್ಥಿತಿಯಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ಇದರಲ್ಲಿ ಸಾಲಗಳನ್ನು ಒದಗಿಸಿದ ಬಾಬ್ತು ಬಡ್ಡಿ ಸಹಾಯಧನದ ಮೊತ್ತ ರೂ. 200.00 ಲಕ್ಷಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆಯಡಿ ಈ ಕೆಳಕಂಡಂತೆ ಭರಿಸತಕ್ಕದ್ದು.

| | |
|---|---|
| 2425–00–107–2–45–ಸ್ವಸಹಾಯ ವರ್ಗಗಳಿಗೆ ಸಾಲಗಳ ಮೇಲಣ ಬಡ್ಡಿ ಧನಸಹಾಯ–106–ಸಹಾಯಧನ (ಯೋಜನೆ) | ರೂ. 143.13. ಲಕ್ಷಗಳು |
| 2425–00–107–2–45–ಸ್ವಸಹಾಯ ವರ್ಗಗಳಿಗೆ ಸಾಲಗಳ ಮೇಲಣ ಬಡ್ಡಿ ಧನಸಹಾಯ–422–ವಿಶೇಷ ಘಟಕ ಯೋಜನೆ (ಯೋಜನೆ) | ರೂ. 41.25. ಲಕ್ಷಗಳು |
| 2425–00–107–2–45–ಸ್ವಸಹಾಯ ವರ್ಗಗಳಿಗೆ ಸಾಲಗಳ ಮೇಲಣ ಬಡ್ಡಿ ಧನಸಹಾಯ–423–ಗಿರಿಜನ ಉಪಯೋಜನೆ (ಯೋಜನೆ) | ರೂ. 15.62. ಲಕ್ಷಗಳು |

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿಯ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಉಪಯೋಗ ಪ್ರಮಾಣಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಯೋಜನೆಯಡಿ ಹಿಂದೆ ಸಹಕಾರ ಸಂಸ್ಥೆಗಳಿಗೆ ಬಿಡುಗಡೆ ಮಾಡಿದ್ದ ಅನುದಾನದ ಪೈಕಿ ಕೆಲವು ಡಿಸಿಸಿ ಬ್ಯಾಂಕುಗಳು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಬಡ್ಡಿ ವಸೂಲಿಯಾಗಿದ್ದ ಪ್ರಕರಣಗಳಲ್ಲಿ ಹೆಚ್ಚುವರಿ ಕ್ಲೇಮು ರೂ. 6.40 ಲಕ್ಷಗಳನ್ನು ಅಪೆಕ್ಸ್ ಬ್ಯಾಂಕಿಗೆ ಜಮಾ ಮಾಡಿದ್ದು ಸದರಿ ಮೊಬಲಗು ಅಪೆಕ್ಸ್ ಬ್ಯಾಂಕಿನ ಅಮಾನತ್ ಖಾತೆಯಲ್ಲಿದ್ದು ಸದರಿ ಮೊಬಲಗನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 355 ವೆಚ್ಚ–2/09 ದಿನಾಂಕ:9.12.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 2885

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿಗಳು
ಸಹಕಾರ ಇಲಾಖೆ,

## ENERGY SECRETARIAT

**Sub :** Delegating the powers vested with CEIG to the Subordinate officers as far as the 3rd party meter testing agency to witness and certify the accuracy of the meter.

**Ref**: 1 KERC Notification No.D/07/6 Dated:11.5.2006

2 letter No.CEIG/DCEI/EI(L)/17233 dated:18.8.2008

3 Letter No. EN/83/EBS/2003 (part) dated:9.2.2009.

4 KERC Letter No. D/07/8/5757 dated:24.3.2009

**PREAMBLE:**

The Government of India has notified the National Electricity Policy which requires the Regulatory Commissions to appoint 3rd party meter testing agency to witness and certify the accuracy of the meter in case of a disputed consumer meter. In requirement of such an appointment, the KERC has appointed the Chief Electrical Inspector to Government of Karnataka to carry out the functions incidental to such certification of disputed meters.

The CEIG vide his letter under ref (2) above has requested the Government to sub delegate the powers of such appointment by KERC among the jurisdictional officers for speedy disposal of the cases.

The Government having sought the opinion of KERC vide Government letter under ref (3) above, the KERC vide letter under ref (4) has conveyed the concurrence for the delegation of powers to the subordinate officers to CEIG.

After considering the facts, Government has issued the following order.

**Government Order No.EN 83 EBS 2003(P), Bangalore, Dated:23rd December, 2009**

In the Circumstances explained in the preamble the Government here by sub-delegates the powers of the independent 3rd party testing agency to witness and certify the accuracy of the meters in case of disputed meter of the consumer of different category of installation to the jurisdictional officers of the Department of Electrical Inspectorate, Karnataka, as per the tabular column detailed below:

| Sl.No | Type of Inspection | jurisdictional Dy CEIG | jurisdictional EI | jurisdictional DEI | jurisdictional AEI |
|---|---|---|---|---|---|
| 1 | Third party meter testing agency to witness and certification of the disputed meters | All disputed meters of EHT installations | All disputed meters of HT installations | All disputed meters of MV installations | All disputed meters of LV installations. |

By Order and in the name of the Governor of Karnataka,

P.R. 2886

**SUJATHAMMA**

Desk Officer, Energy Department

**INFRASTRUCTURE DEVELOPMENT SECRETARIAT**

**Sub :** Release of funds for study of bank ability & Commercial viability of the Bagalkote-Kudachi & Talaguppa Honnavara New Railway Lines

**Read**: 1 G.O. No. IDD 103 NSW 2007, dated:13.12.2007.

2 D.O. letter of PRS IDD No. IDD 62 NSW 2008, dated:4.12.2008.

3 Letter No.2000/PL/88/12, dated:2.2.2009.

4 K-RIDE/Project/17/Bagalkot-Kudachi 2008/02, dated:27.11.2009.

**PREAMBLE:**

The Government vide, Order read at (1) above has released an amount of Rs. 32.,00 lakhs to KRCL to take up the preparation of DPR feasibility survey for the new railway line between Talaguppa-Honnavara Railway stations.

2. In the D.O. letter read at (2) above addressed to chairman Railway Board it was informed that the State Govt. is interested to take up the projects in Bagalkot-Kudachi and Talaguppa-Honnavara new lines.

3. In response to this letter Jt. Director, Tpt, Planning MOR in his letter referred to at (3) above has stated that K-RIDE may conduct necessary feasibility and bank-ability studies at their own cost and decision on implementation would be taken based on the outcome of the studie s. Gok is also interested in taking up Talaguppa-Honnavara and Kudachi-Bagalkot which would offer considerable scope for development of hinterland connectivity to the port and Bagalkot, Bijapur and Belgaum district of North Karnataka.

4. The CEO, K-RIDE in his letter read at (4) above has said that K-RIDE Board has approved to conduct the above said studies through iDeCk and has requested to release an amount of Rs 16.60 lakhs for the two projects.

5. The proposal has been examined and it has been decided to release an amount of Rs. 16.60 lakh (Rupees Sixteen lakhs Sixty Thousand only) for bank-ability and commercial viability study of the Bagalkot-Kudachi and Talaguppa-Honnavara new railway line, Hence this order.

**Government Order No.IDD 62 NSW 2008, Bangalore, Dated:23rd December, 2009**

In circumstances explained in the preamble, Government permits K-RIDE to take up the study of the Bagalkot- Kudachi and Talaguppa-Honnavara new railway lines and to release an amount of Rs. 16.60 lakhs (Rupees Sixteen lakhs Sixty Thousand only) to K-RIDE.

2. The expenditure shall be met under the head of account 3451-00-090-1-06-059-infrastructure preliminary studies other expenditure out of the budget during the year 2009-10.

3. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department. This amount is to be given to iDeCK towards the preparation of the said report.

4. This order is issued in accordance with the delegation of powers given to principal Secretaries to Govt. vide, G.O.No. FD 1 TFP 2008, dated:16.5.2008.

By Order and in the name of the Governor of Karnataka,

P.R. 2887

**N. MANJULA GEETHA**

Under Secretary to Government,

Infrastructure Development Department

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ಬಿ.ಎಸ್. ಮೊಕಾಶಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಸಮಗ್ರ ಶಿಶು ಅಭಿವೃದ್ಧಿ ಯೋಜನೆ, ರೋಣಾ (ಹಾಲಿ ಅಮಾನತ್ತಿನಲ್ಲಿರುವವರು) ಇವರ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ಸೇವೆಗೆ ಪುನರ್ ಸ್ಥಾಪಿಸುವ ಕುರಿತು–ಆದೇಶ.

**ಓದಲಾಗಿದೆ :**
1) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಕಛೇರಿ ಆದೇಶ ಸಂಖ್ಯೆ :ನಿಸಿಶಿಪ/2/2009–10 ದಿ :1.7.2009.
2) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ :ನಿಸಿಶಿಪ :2.2009–10 ದಿನಾಂಕ :14.7.2009.
3) ಮಾನ್ಯ ಮುಖ್ಯಮಂತ್ರಿಗಳ ಸಂಸದೀಯ ಕಾರ್ಯದರ್ಶಿಗಳು, ಮಾನ್ಯ ಮುಖ್ಯ ಮಂತ್ರಿಗಳಿಗೆ ಸಲ್ಲಿಸಿರುವ ಪತ್ರ ದಿ :10.7.2009.

**ಪ್ರಸ್ತಾವನೆ:**

2008–09ನೇ ಸಾಲಿನಲ್ಲಿ ಗದಗ ಜಿಲ್ಲೆಯ ರೋಣಾ ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನೆಗೆ ವಿವಿಧ ಲೆಕ್ಕ ಶೀರ್ಷಿಕೆಯಡಿ ಬಿಡುಗಡೆಯಾದ ಅನುದಾನಕ್ಕಿಂತ ಹೆಚ್ಚಿಗೆ ಖರ್ಚು ಮಾಡಿದ್ದು, ಉಳಿಕೆ ಹಣವೆಂದು ರೂ. 10.80.778/– ಗಳಿಗೆ ಇತರೆ ಸಾಮಾಗ್ರಿಗಳನ್ನು ಖರೀದಿಸಿ ಸಂಶಯಕ್ಕೆ ಎಡಮಾಡಿಕೊಟ್ಟಿರುವ ಅವ್ಯವಹಾರಗಳಿಗೆ ಸಂಬಂಧಪಟ್ಟ ಅಧಿಕಾರಿಯಾದ ಶ್ರೀ ಬಿ.ಎಸ್. ಮೊಕಾಶಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ರೋಣಾ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿ ಇಲಾಖಾ ಮುಖ್ಯಸ್ಥರಾದ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಮೇಲೆ ಓದಲಾದ ಉಲ್ಲೇಖ (1) ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಉಲ್ಲೇಖ (2) ರ ಪ್ರಸ್ತಾವನೆಯಲ್ಲಿ ಶಿಶು ಅಭಿವೃದ್ಧಿ ಯೋಜನಾ ಕಛೇರಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಸಂಬಂಧ ಹೆಚ್ಚುವರಿ ತನಿಖೆಗೆ ಯೋಜನಾಧಿಕಾರಿ, ಸ್ತ್ರೀ ಶಕ್ತಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಮತ್ತು ನೋಡೆಲ್ ಅಧಿಕಾರಿ, ಗದಗ್ ಜಿಲ್ಲೆ ಇವರುಗಳು ದಿನಾಂಕ:25.6.2009 ಮತ್ತು ದಿ.26.6.2009 ರಂದು ಗದಗ್ ಜಿಲ್ಲೆಯ ರೋಣಾ ತಾಲ್ಲೂಕು, ಶಿಶು ಅಭಿವೃದ್ಧಿ ಯೋಜನೆಗೆ ಭೇಟಿ ನೀಡಿ ತನಿಖೆ ನಡೆಸಿ ವರದಿ ಸಲ್ಲಿಸಿದ್ದು, ಸದರಿ ತನಿಖಾ ವರದಿಯಲ್ಲಿ ಪ್ರಸ್ತಾಪಿತ 2 ತಾಲ್ಲೂಕು ಅಂಗನವಾಡಿ

ಕೇಂದ್ರಗಳಿಗೆ ಕಡಿಮೆ ಆಹಾರ ಸಾಮಗ್ರಿ ನೀಡುತ್ತಿರುವುದು ದೃಢಪಟ್ಟಿರುವುದರಿಂದ ಶಿಸ್ತು ಪ್ರಾಧಿಕಾರಿಯಾದ ಇಲಾಖಾ ಮುಖ್ಯಸ್ಥರಾದ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಅಮಾನತ್ತಿನಲ್ಲಿಟ್ಟಿರುವ ಕ್ರಮವನ್ನು ಸಮರ್ಥಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಶ್ರೀ ಬಿ.ಎಸ್. ಮೊಕಾಶಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಸಮಗ್ರ ಶಿಶು ಅಭಿವೃದ್ಧಿ ಯೋಜನೆ, ರೋಣಾ ಹಾಗೂ ಪ್ರಭಾರ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ನರಗುಂದ (ಹಾಲಿ) ಅಮಾನತ್ತಿನಲ್ಲಿರುವವರು ಇವರು ಆಹಾರ ಸಾಮಗ್ರಿಗಳ ಪೂರೈಕೆಯಲ್ಲಿ ದುರುಪಯೋಗ ಹಾಗೂ ಕಳಪೆ ಗುಣಮಟ್ಟದ ಆಹಾರ ಸಾಮಗ್ರಿಗಳನ್ನು ಗುತ್ತಿಗೆದಾರರಿಂದ ಪಡೆದಿರುವುದರಿಂದ ಹಾಗೂ ಅಂಗನವಾಡಿ ಕೇಂದ್ರಗಳಿಗೆ ಸರಿಯಾಗಿ ಮೇಲ್ವಿಚಾರಣೆ ಮಾಡದೇ ಇರುವುದರಿಂದ, ಅಂಗನವಾಡಿ ಕೇಂದ್ರಗಳಿಗೆ ರಶೀದಿಯ ಪ್ರಮಾಣಕ್ಕಿಂತ ಕಡಿಮೆ ವಿತರಣೆ ಮಾಡಿರುವುದು ತನಿಖಾ ವರದಿಯಲ್ಲಿ ಸಾಬೀತಾಗಿರುವ ಹಿನ್ನೆಲೆಯಲ್ಲಿ, ಸದರಿ ಆರೋಪಗಳ ಸತ್ಯಾಸತ್ಯತೆಯನ್ನು ಅರಿಯಲು ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮಮಇ 580 ಎಸ್‌ಜೆಡಿ 2009, ಬೆಂಗಳೂರು, ದಿನಾಂಕ:16ನೇ ಡಿಸೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಬಿ.ಎಸ್. ಮೊಕಾಶಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಸಮಗ್ರ ಶಿಶು ಅಭಿವೃದ್ಧಿ ಯೋಜನೆ, ರೋಣಾ ಹಾಗೂ ಪ್ರಭಾರ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ನರಗುಂದ (ಹಾಲಿ ಅಮಾನತ್ತಿನಲ್ಲಿರುವವರು) ಇವರ ಅಮಾನತ್ತನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಾವಳಿ 1957ರ ನಿಯಮ 10(5)(ಸಿ)ರನ್ವಯ ಪರಿಶೀಲಿಸಿ ರದ್ದುಪಡಿಸಿ, ಸದರಿಯವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಿ, ಶಿಶು ಅಭಿವೃದ್ಧಿ, ಯೋಜನಾಧಿಕಾರಿಗಳು, ಕೊಪ್ಪಳ ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಪಿ.ಆರ್. 2888

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,

**ವಿಷಯ :** ಶ್ರೀ ಎಂ. ರಂಗಸ್ವಾಮಿ, ನಿವೃತ್ತ ಉಪಯೋಜನಾ ನಿರ್ದೇಶಕರು (ಸ್ತ್ರೀಶಕ್ತಿ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಸೌಲಭ್ಯಗಳಿಗೆ ನೀಡಿರುವ ಬಡ್ಡಿಯನ್ನು ತಡವಾಗಿ ಪಾವತಿಸಲು ಕಾರಣರಾದವರಿಂದ ವಸೂಲಿ ಮಾಡುವ ಕುರಿತಂತೆ–ಆದೇಶ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ :ಮಮಇ 747 ಎಸ್ ಜೆಡಿ 2004 ದಿ :6.12.2007
2) ಸರ್ಕಾರದ ಆದೇಶ ಸಂಖ್ಯೆ :ಆಇ (ವಿಶೇಷ) 199 ಪಿಇಎನ್ 93 ದಿ :13.9.1994.
3) ಅರೆ ಸರ್ಕಾರಿ ಪತ್ರ ಸಂಖ್ಯೆ : ಮಮಇ 213 ಎಸ್‌ಜೆಡಿ 2008 ದಿನಾಂಕ : 18.9.2008/ 25.10.2009
4) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಕಛೇರಿಯ ಅರೆ ಸರ್ಕಾರಿ ಪತ್ರ ಸಂಖ್ಯೆ :ಮಮಅಇ/ನಿಸಿಸಾ/ಸಿಆರ್–21/00–01/ದಿನಾಂಕ :13.1.2009 ಮತ್ತು 12.11.2009.

**ಪ್ರಸ್ತಾವನೆ:**

ಶ್ರೀ ಎಂ. ರಂಗಸ್ವಾಮಿ, ನಿವೃತ್ತ ಉಪಯೋಜನಾ ನಿರ್ದೇಶಕರು (ಸ್ತ್ರೀಶಕ್ತಿ) ಪ್ರಧಾನ ಕಛೇರಿ, ಬೆಂಗಳೂರು ಇವರು ದಿನಾಂಕ:30.6.2001 ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿದ್ದು, ಇವರ ವಿರುದ್ಧ ಆ ಅವಧಿಯಲ್ಲಿ ಇಲಾಖಾ ವಿಚಾರಣೆ ಬಾಕಿಯಿರುವ ಕಾರಣ ತಾತ್ಕಾಲಿಕ ಪಿಂಚಣಿಯನ್ನು ಮಾತ್ರ ಬಿಡುಗಡೆಗೊಳಿಸಿ ಉಳಿದ ಎಲ್ಲ ನಿವೃತ್ತ ಉಪದಾನಗಳನ್ನು ತಡೆಹಿಡಿಯಲಾಗಿತ್ತು. ತದನಂತರ ಇವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗದ ಕಾರಣ ಇವರನ್ನು ಆಪಾದನೆಗಳಿಂದ ದೋಷಮುಕ್ತರನ್ನಾಗಿಸಿ ಸರ್ಕಾರಿ ಆದೇಶ ಸಂಖ್ಯೆ:ಮಮಇ 206 ಎಸ್‌ಜೆಡಿ 2001(ಭಾ) ದಿನಾಂಕ:3.3.2004ರಲ್ಲಿ ಆದೇಶ ಹೊರಡಿಸಿರುವುದರಿಂದ ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ ಸದರಿಯವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಉಪದಾನಗಳಿಗೆ ಹಾಗೂ ಗಳಿಕೆ ರಜೆ ನಗದೀಕರಣಕ್ಕೆ ಒಟ್ಟು ರೂ. 90,293,00 ಗಳ ಬಡ್ಡಿಯನ್ನು ಉಲ್ಲೇಖ (2)ರ ಆರ್ಥಿಕ ಇಲಾಖೆಯ ಆದೇಶದನ್ವಯ ತಡೆಹಿಡಿದಿರುವ ನಿವೃತ್ತಿ ಉಪದಾನದ

ಮೇಲೆ ಬಡ್ಡಿ ನೀಡಲು ಮತ್ತು ಸದರಿ ಮೊತ್ತವನ್ನು ವಿಳಂಬಕ್ಕೆ ಕಾರಣರಾದವರಿಂದ ವಸೂಲಾತಿಯಂತೆ ಬಡ್ಡಿ ಪಾವತಿಸಲು ಮಂಜೂರಾತಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (3) ರ ಅರೆ ಸರ್ಕಾರಿ ಪತ್ರಗಳಲ್ಲಿ ಈ ಪ್ರಕರಣದಲ್ಲಿನ ಅನುಷ್ಠಾನದ ವಿಳಂಬಕ್ಕೆ ಹಾಗೂ ಸರ್ಕಾರದ ಆರ್ಥಿಕ ನಷ್ಟಕ್ಕೆ ಕಾರಣರಾದವರನ್ನು ಗುರುತಿಸಿ ಅವರಿಂದ ಬಡ್ಡಿ ಮೊತ್ತ ವಸೂಲು ಮಾಡುವುದು ಮೂಲ ಉದ್ದೇಶವಾದುದರಿಂದ ಸದರಿಯವರ ವಿರುದ್ಧದ ಇಲಾಖಾ ವಿಚಾರಣೆ ಮುಕ್ತಾಯಗೊಂಡು ದೋಷಾರೋಪಣೆಯಿಂದ ಮುಕ್ತಗೊಳಿಸಿದ ಆದೇಶ ಹೊರಡಿಸಿದ ಒಂದು ತಿಂಗಳ ಒಳಗೆ ಪಿಂಚಣಿ ಸೌಲಭ್ಯವನ್ನು ಇತ್ಯರ್ಥಗೊಳಿಸಿಲ್ಲವಾದುದರಿಂದ ಒಂದು ತಿಂಗಳ ನಂತರದಿಂದ ಮಹಾಲೇಖಪಾಲರು ನಿವೃತ್ತಿ ಸೌಲಭ್ಯಗಳಿಗೆ ಪ್ರಾಧಿಕರಣ ಪತ್ರ ನೀಡಿದ ಹಿಂದಿನ ತಿಂಗಳಿನವರೆಗಿನ ಅವಧಿಗೆ ಬಡ್ಡಿ ಎಷ್ಟಾಗುತ್ತದೆ ಎಂಬುದನ್ನು ಲೆಕ್ಕಾಚಾರ ಮಾಡಿ ಅದನ್ನು ಸದರಿ ಅವಧಿಯಲ್ಲಿ ನ್ಯಾಯಯುತವಾಗಿ ಇಟ್ಟುಕೊಳ್ಳಬಹುದಾದ ಅವಧಿಯನ್ನು ಹೊರತುಪಡಿಸಿ ಅದಕ್ಕಿಂತ ಹೆಚ್ಚಿನ ಅವಧಿಯವರೆಗೆ ಕಡತವನ್ನು ಇಟ್ಟುಕೊಂಡಿದ್ದ ಅಧಿಕಾರಿ/ನೌಕರರನ್ನು ಗುರುತಿಸಿ ಅಂತಹವರಿಂದ ಸದರಿ ಹೆಚ್ಚುವರಿ ಅವಧಿಗೆ ಆಗುವ ಬಡ್ಡಿಯನ್ನು ನಿಖರವಾಗಿ ಲೆಕ್ಕಹಾಕಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಜರೂರಾಗಿ ಕಳುಹಿಸುವಂತೆ ಕೋರಲಾಗಿದೆ.

ಉಲ್ಲೇಖಿತ (4)ರ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ವರದಿಯಲ್ಲಿ ಶ್ರೀ ಎಂ. ರಂಗಸ್ವಾಮಿ, ನಿವೃತ್ತ ಉಪಯೋಜನಾ ನಿರ್ದೇಶಕರು (ಸ್ತ್ರೀ ಶಕ್ತಿ) ಪ್ರಧಾನ ಕಛೇರಿ, ಬೆಂಗಳೂರು ರವರ ಇಲಾಖಾ ವಿಚಾರಣೆ ಮುಕ್ತಾಯಗೊಂಡ ನಂತರ ನಿವೃತ್ತಿ ವೇತನ ಬಿಡುಗಡೆ ಮಾಡಲು ಮಹಾಲೇಖಪಾಲರಿಗೆ ನಿರ್ದೇಶಿಸುವಂತೆ ದಿ:4.9.2004ರಂದು ಸಚಿವಾಲಯಕ್ಕೆ ಪ್ರಸ್ತಾವನೆ ಕಳುಹಿಸಿದ್ದು, ಸದರಿ ಪ್ರಸ್ತಾವನೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸಚಿವಾಲಯವು (ಸೇವೆಗಳು–ಬಿ) ಶಾಖೆಯು ಪರಿಶೀಲಿಸಲು ಇಲಾಖಾ ವಿಚಾರಣೆ ಬಾಕಿಯಿದ್ದ ಅವಧಿಗೆ ಮತ್ತು ಇಲಾಖೆ ವಿಚಾರಣೆ ಮುಗಿದ ನಂತರ ನಿವೃತ್ತಿ ಉಪದಾನ ಮತ್ತು ಗಳಿಕೆ ರಜೆ ನಗದೀಕರಣ ಸೌಲಭ್ಯಗಳಿಗೆ ಪಾವತಿ ಮಾಡಬೇಕಾದ ಬಡ್ಡಿಯ ವಿವರಗಳನ್ನು ಈ ಕೆಳಕಂಡಂತೆ ಒದಗಿಸಿ ವಿಚಾರಣೆಯಲ್ಲಿ ದೋಷಮುಕ್ತರೆಂದು ಪರಿಗಣಿಸಿದ ನಂತರದ ಅವಧಿಗೆ ರೂ. 22,146,36ಗಳ ಬಡ್ಡಿಯನ್ನು ನಿವೃತ್ತಿ ಅಧಿಕಾರಿಗೆ ಪಾವತಿಸಿರುವುದರಿಂದ ಈ ಮೊತ್ತವನ್ನು ಸಂಬಂಧಿಸಿದ ವಿಳಂಬದಾರರಿಂದ (ಅಂದರೆ ನಿವೃತ್ತಿ ವೇತನ ಉಪದಾನ ರೂ. 17,148.67 ಮತ್ತು ಗಳಿಕೆ ರಜೆ ನಗದೀಕರಣ ಮೊತ್ತ ರೂ. 4,997.69) ವಸೂಲಾತಿ ಮಾಡಿ ಪಾವತಿಸಬೇಕಾಗುತ್ತದೆಯೆಂದು ತಿಳಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಸರ್ಕಾರಿ ಆದೇಶ ಸಂಖ್ಯೆ ಆಇ (ವಿಶೇಷ) 199 ಪಿಇಎಸ್ 93 ದಿನಾಂಕ:13.9.1994ರ ಪ್ರಕಾರ ಈ ಪ್ರಕರಣದಲ್ಲಿನ ನಿವೃತ್ತಿ ಅಧಿಕಾರಿಗೆ ದಿನಾಂಕ:3.3.2004ರ ಸರ್ಕಾರಿ ಆದೇಶದನ್ವಯ ಶಿಸ್ತು ಪ್ರಕರಣದ ಅಂತಿಮ ಆದೇಶ ಹೊರಡಿಸಿದ 3 ತಿಂಗಳ ಒಳಗೆ ಅಂದರೆ ಜೂನ್ 2004ರೊಳಗೆ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸಬೇಕಾಗಿದ್ದು, ಆದರೆ ಶ್ರೀಯುತದ ನಿವೃತ್ತಿ ಉಪದಾನ ಬಿಡುಗಡೆಗೆ ಸಂಬಂಧ ಮಹಾಲೇಖಪಾಲರಿಗೆ ನಿರ್ದೇಶಿಸಲು ದಿನಾಂಕ:4.9.2004 ರಂದು ಸರ್ಕಾರಕ್ಕೆ ಪ್ರಸ್ತಾವನೆ ಬಂದಿದ್ದು, ಸದರಿ ಪ್ರಸ್ತಾವನೆಯನ್ನು ದಿನಾಂಕ:29.11.2005 ರಂದು ಅಂದರೆ ಸುಮಾರು 1 ವರ್ಷ 8 ತಿಂಗಳು 26 ದಿನಗಳು ವಿಳಂಬವಾಗಿ ಮಹಾಲೇಖಪಾಲರಿಗೆ ಕಳುಹಿಸಿರುವುದರಿಂದ ಈ ವಿಳಂಬಕ್ಕೆ ಕಾರಣರಾದ ಅಧಿಕಾರಿಯಾದ ಶ್ರೀಮತಿ ಅನುಸೂಯಮ್ಮ ಹಿಂದಿನ ಶಾಖಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ಸೇವೆಗಳು–ಬಿ) ಮತ್ತು ಶ್ರೀ ರಾಜಗೋಪಾಲ್, ಹಿರಿಯ ಸಹಾಯಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ಸೇವೆಗಳು–ಬಿ) ಇವರುಗಳಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟ ರೂ. 22,146.36/– ಗಳನ್ನು ಸಮ ಕಂತುಗಳಲ್ಲಿ ವಸೂಲಾತಿ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಮಮಇ 213 ಎಸ್‌ಜಿಡಿ 2008, ಬೆಂಗಳೂರು, ದಿನಾಂಕ:17ನೇ ಡಿಸೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಂ. ರಂಗಸ್ವಾಮಿ, ನಿವೃತ್ತ ಉಪಯೋಜನಾ ನಿರ್ದೇಶಕರು (ಸ್ತ್ರೀಶಕ್ತಿ) ಇವರ ನಿವೃತ್ತಿ ಉಪದಾನ ಪಾವತಿಯಲ್ಲಿ ಉಂಟಾದ ವಿಳಂಬಕ್ಕೆ ಕಾರಣರಾದ ಶ್ರೀಮತಿ ಜಿ.ಹೆಚ್. ಅನುಸೂಯಮ್ಮ, ಹಿಂದಿನ ಶಾಖಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹಾಲಿ ಶಾಖಾಧಿಕಾರಿ, ಜಲಸಂಪನ್ಮೂಲ ಇಲಾಖೆ (ಎಂ.ಎಂ–2) ಇವರಿಂದ ರೂ. 13,288/– ಹಾಗೂ ಶ್ರೀ ಎಸ್.ಆರ್. ರಾಜಗೋಪಾಲ್, ಹಿಂದಿನ ಹಿರಿಯ ಸಹಾಯಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹಾಲಿ ಶಾಖಾಧಿಕಾರಿ, ಆರ್ಥಿಕ ಇಲಾಖೆ, ಇವರಿಂದ ರೂ. 8858/–ಗಳನ್ನು ಇವರುಗಳ ವೇತನದಿಂದ ಸಮಕಂತುಗಳಲ್ಲಿ ವಸೂಲಾತಿ ಮಾಡಲು ಕ್ರಮ ಜರುಗಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಪಿ.ಆರ್. 2889

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು 2006–07ನೇ ಸಾಲಿಗೆ.

**ಓದಲಾಗಿದೆ :**

1) ದಿನಾಂಕ 12.04.2007ರಂದು ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.
2) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 13.06.07.
3) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 12.09.07
4) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (2) ದಿನಾಂಕ: 19.10.07
5) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (3) ದಿನಾಂಕ: 02.11.2007.
6) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–02 (4)) ದಿನಾಂಕ: 01.01.08.
7) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 22.02.08.
8) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08 (ಭಾ–2) ದಿನಾಂಕ: 12.03.2008
9) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 20.03.08
10) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 25.03.08
11) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2)(9) ದಿನಾಂಕ 21.05.2008
12) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 08 (ಭಾ–2) ದಿನಾಂಕ 13.06.2008.
13) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 2007,(ಭಾ–2)(10) ದಿನಾಂಕ:30–06–2008.
14) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 2007,(ಭಾ–2)(11) ದಿನಾಂಕ 24.11.2008.
15) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 2007 (ಭಾ–2)(12) ದಿನಾಂಕ 02.07.2009
16) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 2007 (ಭಾ–2(13) ದಿನಾಂಕ 11.08.2009
17) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/13/ಬಿಜಾಪುರ/2007–08 ದಿ. 28.02.09
18) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/13/2007–08 ದಿನಾಂಕ 01.06.2009.
19) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್/ಟಿಟಿ/15/2008–09 ದಿನಾಂಕ 12.06.2009.
20) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/16/2007–08 ದಿನಾಂಕ 09.07.2009.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (2) ರಿಂದ (6) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ 2006–07ನೇ ಸಾಲಿನ ಸಕ್ಕರೆ ವರ್ಷಕ್ಕೆ ಸಂಬಂಧಿಸಿದಂತೆ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಾಗಾಣಿಕೆ ಸಹಾಯಧನ, ರೂ.3,62,18.916/– ರೈತರಿಗೆ ಪರಿಹಾರ ಧನ ರೂ. 25,00,00,000/– ಮತ್ತು ಕಾರ್ಖಾನೆಗಳಿಗೆ ಸಹಾಯಧನ 21,13,92,000/– ರೂಗಳು ಸೇರಿ ಒಟ್ಟು 49,76,10,916/–ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7) (9) (10) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಕಬ್ಬು ಬೆಳೆದ ರೈತರಿಗೆ ಪರಿಹಾರ ನೀಡಲು ಕ್ರಮವಾಗಿ 7.00 ಕೋಟಿ ರೂಗಳು, 6.64 ಕೋಟಿ ರೂಗಳು ಮತ್ತು 1,25,11,000/– ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (8) ರಲ್ಲಿರುವ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯ ನಂತರ ಅಂದರೆ ದಿನಾಂಕ: 01.06.07 ರಿಂದ 31.07.07ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ 8.75 ಕೋಟಿ ರೂಗಳ ಸಹಾಯಧನ ಬಿಡುಗಡೆಗೆ ಮಂಜೂರಾತಿ ನೀಡಲಾಗಿದ್ದು, ಅದರಂತೆ ಮೇಲೆ ಓದಲಾದ (10)ರಲ್ಲಿರುವ ಸರ್ಕಾರದ ಆದೇಶದಲ್ಲಿ ಪ್ರತಿ ಟನ್ ಕಬ್ಬಿಗೆ ರೂ.100/–ನಂತೆ 8,74,92,000/– ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (11)ರಲ್ಲಿರುವ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯಲ್ಲಿ ನಂತರ ಅಂದರೆ 16.04.2007 ರಿಂದ 31.05.2007ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್ ಕಬ್ಬಿಗೆ ರೂ.100/–ರಂತೆ ರೂ.10,00,00,000/–ಗಳ ಸಹಾಯಧನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (13) ರಲ್ಲಿರುವ ಆದೇಶದಲ್ಲಿ ಬಿಜಾಪುರ, ಮೈಸೂರು ಮತ್ತು ಬೆಳಗಾಂ ಜಿಲ್ಲೆಗಳ ರೈತರಿಗೆ ಪರಿಹಾರಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು 3.00 ಕೋಟಿ ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (14) ರಲ್ಲಿರುವ ಆದೇಶದಲ್ಲಿ ರೈತರಿಗೆ ಪರಿಹಾರ ಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು ರೂ. 3,03,73,203/– ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (15) ರಲ್ಲಿರುವ ಆದೇಶದಲ್ಲಿ ಬಿಜಾಪುರ, ಗುಲ್ಬರ್ಗಾ, ಬೆಳಗಾಂ ಜಿಲ್ಲೆಗಳಿಂದ ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಮತ್ತು ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಿದ ಪ್ರತಿ ಟನ್‌ಗೆ ರೂ.2/–ರಂತೆ ಸಾಗಾಣಿಕೆ ಸಹಾಯಧನ 1,81,07,599–00 ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (16) ರಲ್ಲಿರುವ ಆದೇಶದಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ಮತ್ತು ಸಿಂಧಗಿ ತಾಲ್ಲೂಕಿನ ಕಬ್ಬು ಬೆಳೆದು ಕಟಾವಾಗದೆ ಜಮೀನಿನಲ್ಲಿಯೇ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ 25,000/– ರೂ.ಗಳಂತೆ ರೈತರಿಗೆ ಪಾವತಿಸುವ ಸಲುವಾಗಿ 15.00 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (17) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರದಲ್ಲಿ ಬೆಳಗಾವಿ, ಬಿಜಾಪುರ, ಬಾಗಲಕೋಟೆ, ಧಾರವಾಡ ಮತ್ತು ಗುಲಬರ್ಗಾ ಜಿಲ್ಲೆಯ ಕಬ್ಬು ಮಹಾರಾಷ್ಟ್ರ ರಾಜ್ಯದ ಶ್ರೀ ರೇಣುಕಾ ಶುಗರ್ಸ್, ಅಜರ ಮತ್ತು ಅರಗ ಘಟಕಗಳಿಗೆ ಸರಬರಾಜು ಮಾಡಿದ್ದು, ಈ ಸಂಬಂಧ 41,98,673/– ರೂ.ಗಳನ್ನು ಬೆಳಗಾವಿ, ಬಿಜಾಪುರ, ಬಾಗಲಕೋಟೆ, ಧಾರವಾಡ ಮತ್ತು ಗುಲಬರ್ಗಾ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ **ರೈತರಿಗೆ** ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (18) ರಲ್ಲಿರುವ ಆಯುಕ್ತರ ಪತ್ರದಲ್ಲಿ ಮೈಸೂರು ಜಿಲ್ಲೆಯ ಬನ್ನಾರಿ ಅಮ್ಮನ್ ಶುಗರ್ಸ್ (ಲಿ) ನಂಜನಗೂಡು ಕಾರ್ಖಾನೆಗೆ ದಿನಾಂಕ 16.04.2007ರಿಂದ 31.05.2007ರ ಅವಧಿಯಲ್ಲಿ ಕಬ್ಬು ಸರಬರಾಜು ಮಾಡಿಕೊಂಡಿದ್ದು, ಈ ಸಂಬಂಧ ಸಾಗಾಣಿಕೆ ಸಹಾಯಧನ 17,97,742/– ರೂ.ಗಳನ್ನು **ಕಾರ್ಖಾನೆಗೆ** ಪಾವತಿಸುವ ಸಲುವಾಗಿ ಜಿಲ್ಲಾಧಿಕಾರಿ ಮೈಸೂರು ರವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (19) ರಲ್ಲಿರುವ ಆಯುಕ್ತರ ಪತ್ರದಲ್ಲಿ ಬಿಜಾಪುರ ಜಿಲ್ಲೆಯಿಂದ ಪಕ್ಕದ ಮಹಾರಾಷ್ಟ್ರ ರಾಜ್ಯದ ಮಹಾಂಕಾಳಿ ಸಹಕಾರಿ ಸಕ್ಕರೆ ಕಾರ್ಖಾನೆಗೆ ದಿನಾಂಕ 16.04.2007ರಿಂದ 31.05.2007ರ ಅವಧಿಯಲ್ಲಿ ಕಬ್ಬು ಸರಬರಾಜು ಮಾಡಿದ್ದು, ಈ ಸಂಬಂಧ ಸಾಗಾಣಿಕೆ ಸಹಾಯಧನ 12,46,509/– ರೂ.ಗಳನ್ನು **ರೈತರಿಗೆ** ಪಾವತಿಸುವ ಸಲುವಾಗಿ ಜಿಲ್ಲಾಧಿಕಾರಿಗಳು ಬಿಜಾಪುರ ಇವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (20) ರಲ್ಲಿರುವ ಆಯುಕ್ತರ ಪತ್ರದಲ್ಲಿ ಬಿಜಾಪುರ ಜಿಲ್ಲೆಯಿಂದ ಪಕ್ಕದ ಮಹಾರಾಷ್ಟ್ರ ರಾಜ್ಯದ 4 ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ್ದು, ಈ ಸಂಬಂಧ ಸಾಗಾಣಿಕೆ ಸಹಾಯಧನ 25,40,531/– ರೂ.ಗಳನ್ನು **ರೈತರಿಗೆ** ಪಾವತಿಸುವ ಸಲುವಾಗಿ ಜಿಲ್ಲಾಧಿಕಾರಿ ಬಿಜಾಪುರ ರವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 58 ಎಸ್‌ಜಿಎಫ್ 2007 (ಭಾ–2) (14), ಬೆಂಗಳೂರು ದಿನಾಂಕ : 25ನೇ ನವೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 2006–07ನೇ ಸಾಲಿನ ಸಕ್ಕರೆ ವರ್ಷದಲ್ಲಿ ರಾಜ್ಯದ ಬೆಳಗಾವಿ, ಬಿಜಾಪುರ, ಬಾಗಲಕೋಟೆ, ಧಾರವಾಡ ಮತ್ತು ಗುಲಬರ್ಗಾ ಜಿಲ್ಲೆಗಳಿಂದ ಮಹಾರಾಷ್ಟ್ರದ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ್ದು, ಮತ್ತು ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಬನ್ನಾರಿ ಅಮ್ಮನ್ ಸಕ್ಕರೆ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡಿದ್ದು, ಸರಬರಾಜು ಮಾಡಿದ ಕಬ್ಬಿಗೆ ಪ್ರತಿ ಟನ್‌ಗೆ ಪ್ರತಿ ಕಿ.ಮೀ.ಗೆ ರೂ. 2/– ರಂತೆ ಒಟ್ಟು 97,83,455/– ರೂ.ಗಳನ್ನು (ತೊಂಬತ್ತೇಳು ಲಕ್ಷದ ಎಂಬತ್ಮೂರು ಸಾವಿರದ ನಾಲ್ಕುನೂರ ಐವತ್ತೈದು ರೂ.ಗಳು ಮಾತ್ರ)

ಸಾಗಾಣಿಕೆ ಸಹಾಯಧನವನ್ನು ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ಪಾವತಿಸುವ ಸಲುವಾಗಿ ಈ ಕೆಳಕಂಡ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

**ಸಾಗಾಣಿಕೆ ಸಹಾಯಧನ** (ರೂ.ಗಳಲ್ಲಿ)

| | | | |
|---|---|---|---|
| 1) ಬೆಳಗಾವಿ ಜಿಲ್ಲೆ (ರೈತರಿಗೆ) | 38,67,422–00 | ಜಿಲ್ಲಾಧಿಕಾರಿ ಬೆಳಗಾವಿ | ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಿದ ಕಬ್ಬಿಗೆ |
| 2) ಬಿಜಾಪುರ ಜಿಲ್ಲೆ (ರೈತರಿಗೆ) | 2,17,325–00 | ಜಿಲ್ಲಾಧಿಕಾರಿ, ಬಿಜಾಪುರ | |
| 3) ಬಾಗಲಕೋಟೆ ಜಿಲ್ಲೆ (ರೈತರಿಗೆ) | 85,021–00 | ಜಿಲ್ಲಾಧಿಕಾರಿ, ಬಾಗಲಕೋಟೆ | |
| 4) ಧಾರವಾಡ ಜಿಲ್ಲೆ (ರೈತರಿಗೆ) | 21,912–00 | ಜಿಲ್ಲಾಧಿಕಾರಿ, ಧಾರವಾಡ | |
| 5) ಗುಲಬರ್ಗಾ ಜಿಲ್ಲೆ (ರೈತರಿಗೆ) | 6,993–00 | ಜಿಲ್ಲಾಧಿಕಾರಿ, ಗುಲಬರ್ಗಾ | |
| 6) ಬಿಜಾಪುರ ಜಿಲ್ಲೆ (ರೈತರಿಗೆ) | 12,46,509–00 | ಜಿಲ್ಲಾಧಿಕಾರಿ, ಬಿಜಾಪುರ | |
| 7) ಬಿಜಾಪುರ ಜಿಲ್ಲೆ (ರೈತರಿಗೆ) | 25,40,531–00 | ಜಿಲ್ಲಾಧಿಕಾರಿ, ಬಿಜಾಪುರ | |
| 8) ಮೈಸೂರು ಜಿಲ್ಲೆ (ಕಾರ್ಖಾನೆಗೆ) ಬನ್ನಾರಿ ಅಮ್ಮನ್ ಶುಗರ್ಸ್ (ಲಿ) | 17,97,742–00 | | |
| **ಒಟ್ಟು** | **97,83,455–00** | | |

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "2852–08–201–0–07 (ಯೋಜನೆ)" ಸಹಾಯಧನ ಅಡಿಯಲ್ಲಿ 34.50 ಕೋಟಿ ರೂಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಮೇಲಿನಂತೆ 97,83,455/– ರೂ.ಗಳನ್ನು ರೈತರಿಗೆ ಮತ್ತು ಕಾರ್ಖಾನೆಗಳಿಗೆ ಸಾಗಾಣಿಕೆ ಸಹಾಯಧನವಾಗಿ ಬಿಡುಗಡೆ ಮಾಡಲು ಮಂಜೂರು ಮಾಡಲಾಗಿದೆ.

ಕ್ರ. ಸಂ. (8)ರಲ್ಲಿರುವ ಬನ್ನಾರಿ ಅಮ್ಮನ್ ಶುಗರ್ಸ್ (ಲಿ) ಅಲಗಂಚಿ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ ಈ ಕಾರ್ಖಾನೆಯು ಕಬ್ಬು ಖರೀದಿ ತೆರಿಗೆಯನ್ನು ಸರ್ಕಾರಕ್ಕೆ ಬಾಕಿ ಉಳಿಸಿಕೊಂಡಿದ್ದು, ಕಾರ್ಖಾನೆಗೆ ಮಂಜೂರು ಮಾಡಲಾದ ಸಾಗಾಣಿಕೆ ಸಹಾಯಧನ 17,97,742/– ರೂ.ಗಳನ್ನು ಕಬ್ಬು ಖರೀದಿ ತೆರಿಗೆ ಬಾಕಿಗೆ ಹೊಂದಾಣಿಕೆ ಮಾಡಿಕೊಳ್ಳಲಾಗಿದೆ. ಪುಸ್ತಕ ಹೊಂದಾಣಿಕೆ ಮೊತ್ತ 17,97,742/– ರೂ.ಗಳನ್ನು ಲೆಕ್ಕ ಶೀರ್ಷಿಕೆ 2852–08–201–0–07 ವೆಚ್ಚ ಹಾಕಿ ಲೆಕ್ಕ ಶೀರ್ಷಿಕೆ 0040–00–110–1–04ಗೆ ಜಮೆ ತೋರಿಸಿ 2009–10ನೇ ಸಾಲಿನ ಲೆಕ್ಕಗಳಲ್ಲಿ ಮಹಾಲೇಖಪಾಲರು (ಹಕ್ಕು ಮತ್ತು ರಹದಾರಿ) ಲೆಕ್ಕ ಹೊಂದಾಣಿಕೆಯನ್ನು ಮಾಡುವರು.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ: 13–06–2007 ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳಯನ್ವಯ ಪರಿಶೀಲಿಸಿ, ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1645 ವೆಚ್ಚ–1/2009 ದಿನಾಂಕ: 13.11.09 ರಂದು ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಆನಂದ್ ಕುಮಾರ್**

ಪಿ.ಆರ್. 2670

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ :** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2), ದಿನಾಂಕ:12.03.2008.
2) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2) ದಿನಾಂಕ 13.06.2008.
3) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2(2)) ದಿನಾಂಕ 28.08.2008.
4) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2(3)) ದಿನಾಂಕ 16.12.2008.
5) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (4) ದಿನಾಂಕ 02.01.2009.
6) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (5) ದಿನಾಂಕ 19.01.2009.

7) ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳು ದಿನಾಂಕ 03.12.2008, 16.12.2008, 27.12.2008, 12.01.2009, 13.01.2009, 09.02.2009, 11.02.2009, 13.02.2009, 16.02.2009, 18.02.2009, 19.02.2009, 03.03.2009, 04.03.2009, 11.03.2009 13.03.2009, 18.03.2009, 09.04.2009 ಮತ್ತು 20.04.2009.

8) ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (6) ದಿನಾಂಕ 07.07.2009.

9) ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳು ದಿನಾಂಕ 08.05.2009, 08.05.2009, 09.06.2009, 30.06.2009, 30.06.2009, 27.07.2009, 21.07.2009, 22.07.2009, 25.07.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿನಲ್ಲಿ ದಿನಾಂಕ:31–03–2008ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ನುರಿಸಬೇಕೆಂಬ ಹಿನ್ನೆಲೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವು ವಿನಾಯಿತಿ ಮತ್ತು ಸಹಾಯಧನ ಸೌಲಭ್ಯಗಳನ್ನು ನೀಡಲಾಗುವುದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿರುವ ಆದೇಶದಲ್ಲಿ 2.00 ಕೋಟಿ ರೂ.ಗಳನ್ನು ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (3)ರಲ್ಲಿರುವ ಆದೇಶದಲ್ಲಿ 100.59 ಲಕ್ಷ ರೂ.ಗಳನ್ನು ಮೈಸೂರು ಪೇಪರ್ ಮಿಲ್ಸ್ ಲಿ., ರವರಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (4)ರಲ್ಲಿರುವ ಆದೇಶದಲ್ಲಿ 6,.64,76,652/– ರೂ.ಗಳನ್ನು ನಂದಿ ಸ.ಸ.ಕಾರ್ಖಾನೆ ಮತ್ತು ದೂದ್ ಗಂಗಾ ಸ.ಸ.ಕಾ, ಈ ಎರಡು ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (5)ರಲ್ಲಿರುವ ಆದೇಶದಲ್ಲಿ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ. 100/– ಗಳ ಸಹಾಯಧನ ಬಾಬ್ತು ಶೇ. 50ರಷ್ಟು 11,15,00,000/– ರೂ.ಗಳನ್ನು ಸಾಗಾಣಿಕೆ ಸಹಾಯಧನ 7,25,00,000/– ರೂ.ಗಳನ್ನು ಒಟ್ಟು ಸೇರಿ 18,40,00,000/– ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (6) ರಲ್ಲಿರುವ ಆದೇಶದಲ್ಲಿ 100/– ರೂ.ಗಳ ಸಹಾಯಧನ ಬಾಬ್ತು 4,90,05,135/– ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳ ಶಿಫಾರಸ್ಸಿನಂತೆ ಮೇಲೆ ಓದಲಾದ (8)ರಲ್ಲಿರುವ ಆದೇಶದಲ್ಲಿ ಸಾಗಾಣಿಕೆ ಸಹಾಯಧನ 3,69,77,708/– ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (9) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳಲ್ಲಿ ರಾಜ್ಯದ 9 ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯಲ್ಲಿ ಕಬ್ಬು ನುರಿಸಿದ್ದು, ಮತ್ತು 30 ಕಿ.ಮೀ.ಗೆ ಮೀರಿದ ದೂರದಿಂದ ಕಬ್ಬು ಸಾಗಾಣಿಕೆ ಮಾಡಿಕೊಂಡಿದ್ದು, ಹಾಗೂ ಸಕ್ಕರೆ ರಫ್ತು ಮಾಡಲಾಗಿದ್ದು, ಈ ಸಂಬಂಧ ದಿನಾಂಕ 12.03.2008ರ ಸರ್ಕಾರದ ಆದೇಶದಂತೆ 4,16,94,274/– ರೂ.ಗಳ ಸಹಾಯಧನ, 1,36,52,873/– ರೂ.ಗಳ ಸಾಗಾಣಿಕೆ ಸಹಾಯಧನ ಮತ್ತು 64,10,000/– ರೂ.ಗಳ ರಫ್ತು ಸಹಾಯಧನವನ್ನು ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಹಣ ಬಿಡುಗಡೆಗೆ ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (7), ಬೆಂಗಳೂರು, ದಿನಾಂಕ 07ನೇ ಡಿಸೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಫ್ತು ಸಹಾಯಧನ ಮಿತಿಯನ್ನು 10.00 ಕೋಟಿ ರೂ.ಗಳಿಗೆ ಸೀಮಿತಗೊಳಿಸಲಾಗಿದ್ದು, 2007–08ನೇ ಸಾಲಿನಲ್ಲಿ ರಾಜ್ಯದ ಈ ಕೆಳಕಂಡ 4 ಸಕ್ಕರೆ ಕಾರ್ಖಾನೆಗಳು ಸಕ್ಕರೆ ರಫ್ತು ಮಾಡಿದ್ದು, 3,87,56,200/– ರೂ. (ಮೂರು ಕೋಟಿ, ಎಂಬತ್ತೇಳು ಲಕ್ಷ ಐವತ್ತಾರು ಸಾವಿರದ ಇನ್ನೂರು ರೂ.ಗಳು ಮಾತ್ರ) ಗಳ ರಫ್ತು ಸಹಾಯಧನವನ್ನು 4 ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆಗೆ ಮಂಜೂರು ಮಾಡಲಾಗಿದೆ, ಕ್ರ. ಸಂ. (1) & (3)ರಲ್ಲಿರುವ ಕಾರ್ಖಾನೆಗಳು ಸರ್ಕಾರಕ್ಕೆ ಕಬ್ಬು ಖರೀದಿ ತೆರಿಗೆ ಬಾಕಿ ಉಳಿಸಿಕೊಂಡಿದ್ದು,ಬಿಡುಗಡೆ ಮಾಡಲಾದ ಹಣವನ್ನು ಸರ್ಕಾರದ ಲೆಕ್ಕಕ್ಕೆ ಹೊಂದಾಣಿಕೆ ಮಾಡಿಕೊಳ್ಳಲಾಗಿದೆ. ಕ್ರಮ ಸಂಖ್ಯೆ

(2) & (4)ರಲ್ಲಿರುವ ಕಾರ್ಖಾನೆಗಳಿಗೆ ನಗಧಾಗಿ ಬಿಡುಗಡೆ ಮಾಡುವ ಸಲುವಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

(ರೂ.ಗಳಲ್ಲಿ)

| ಕಾರ್ಖಾನೆ ಹೆಸರು | ರಫ್ತು ಸಹಾಯಧನ ಮೊತ್ತ | ಜಿಲ್ಲಾಧಿಕಾರಿ / ಜಿಲ್ಲೆ |
|---|---|---|
| 1) ಶ್ರೀ ರಾಮ ಸ.ಸ.ಕಾ (ಅಂಬಿಕಾ ಶುಗರ್ಸ್ (ಲಿ) ರವರು ಗುತ್ತಿಗೆ ಪಡೆದಿರುತ್ತಾರೆ) ಚುಂಚನಕಟ್ಟೆ | 13,00,000–00 | ಸರ್ಕಾರದ ಲೆಕ್ಕಕ್ಕೆ ಜಮೆ ಮಾಡಿಕೊಳ್ಳಲಾಗಿದೆ |
| 2) ಶ್ರೀ ರೇಣುಕಾ ಶುಗರ್ಸ್ (ಲಿ) ಸೌದತ್ತಿ | 2,27,18,000–00 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ |
| 3) ಎನ್.ಎಸ್.ಎಲ್. ಶುಗರ್ಸ್ (ಲಿ), ಕೊಪ್ಪ | 20,80,800–00 | ಸರ್ಕಾರದ ಲೆಕ್ಕಕ್ಕೆ ಜಮೆ ಮಾಡಿಕೊಳ್ಳಲಾಗಿದೆ |
| 4) ಬೀಳಗಿ ಶುಗರ್ಸ್ (ಲಿ), ಬಾಡಗಂಡಿ | 1,26,57,400–00 | ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ |
| **ಒಟ್ಟು** | **3,87,56,200–00** | |

2009–10ನೇ ಸಾಲಿನ ಆಯವ್ಯಯದಲ್ಲಿ ಈ ಉದ್ದೇಶಕ್ಕಾಗಿ ಲೆಕ್ಕ ಶೀರ್ಷಿಕೆ 2852–08–201–0–07–422 (ಯೋಜನೆ)ರಡಿಯಲ್ಲಿ ಲಭ್ಯವಿರುವ ಅನುದಾನದಲ್ಲಿ 3,87,56,200/– ರೂ.ಗಳನ್ನು ಕಾರ್ಖಾನೆಗಳಿಗೆ ರಫ್ತು ಸಹಾಯಧನವಾಗಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) (ಅಂಬಿಕಾ ಶುಗರ್ಸ್ (ಲಿ) ರವರು ಗುತ್ತಿಗೆ ಪಡೆದಿರುತ್ತಾರೆ) ಚುಂಚನಕಟ್ಟೆ ಈ ಕಾರ್ಖಾನೆಯು ಕಬ್ಬು ಖರೀದಿ ತೆರಿಗೆಯನ್ನು ಸರ್ಕಾರಕ್ಕೆ ಬಾಕಿ ಉಳಿಸಿಕೊಂಡಿದ್ದು, ಕಾರ್ಖಾನೆಗೆ ಮಂಜೂರು ಮಾಡಲಾದ ರಫ್ತು ಸಹಾಯಧನ 13,00,000/– ರೂ.ಗಳನ್ನು ಕಬ್ಬು ಖರೀದಿ ತೆರಿಗೆ ಬಾಕಿಗೆ ಹೊಂದಾಣಿಕೆ ಮಾಡಿಕೊಳ್ಳಲಾಗಿದೆ. ಪುಸ್ತಕ ಹೊಂದಾಣಿಕೆಯ ಮೊತ್ತ 13,00,000/– ರೂ.ಗಳನ್ನು ಲೆಕ್ಕ ಶೀರ್ಷಿಕೆ 2852–08–201–0–07–422 (ಯೋಜನೆ)ಗೆ ವೆಚ್ಚ ಹಾಕಿ ಲೆಕ್ಕ ಶೀರ್ಷಿಕೆ 0040–00–110–1–04ಗೆ ಜಮೆ ತೋರಿಸಿ 2009–10ನೇ ಸಾಲಿನ ಲೆಕ್ಕಗಳಲ್ಲಿ ಮಹಾಲೇಖಪಾಲರು (ಹಕ್ಕು ಮತ್ತು ರಹದಾರಿ) ಲೆಕ್ಕ ಹೊಂದಾಣಿಕೆಯನ್ನು ಮಾಡುವರು.

ಮೆ: ಎಸ್.ಎಸ್.ಎಲ್. ಶುಗರ್ಸ್ (ಲಿ) ಕೊಪ್ಪ ಈ ಕಾರ್ಖಾನೆಯು ಕಬ್ಬು ಖರೀದಿ ತೆರಿಗೆಯನ್ನು ಸರ್ಕಾರಕ್ಕೆ ಬಾಕಿ ಉಳಿಸಿಕೊಂಡಿದ್ದು, ಕಾರ್ಖಾನೆಗೆ ಮಂಜೂರು ಮಾಡಲಾದ ರಫ್ತು ಸಹಾಯಧನ 20,80,800/– ರೂ.ಗಳನ್ನು ಕಬ್ಬು ಖರೀದಿ ತೆರಿಗೆ ಬಾಕಿಗೆ ಹೊಂದಾಣಿಕೆ ಮಾಡಿಕೊಳ್ಳಲಾಗಿದೆ. ಪುಸ್ತಕ ಹೊಂದಾಣಿಕೆಯ ಮೊತ್ತ 20,80,000/– ರೂ.ಗಳನ್ನು ಲೆಕ್ಕ ಶೀರ್ಷಿಕೆ 2852–08–201–0–07–422 (ಯೋಜನೆ)ಗೆ ವೆಚ್ಚ ಹಾಕಿ ಲೆಕ್ಕ ಶೀರ್ಷಿಕೆ 0040–00–110–1–04ಗೆ ಜಮೆ ತೋರಿಸಿ 2009–10ನೇ ಸಾಲಿನ ಲೆಕ್ಕಗಳಲ್ಲಿ ಮಹಾಲೇಖಪಾಲರು (ಹಕ್ಕು ಮತ್ತು ರಹದಾರಿ) ಲೆಕ್ಕ ಹೊಂದಾಣಿಕೆಯನ್ನು ಮಾಡುವರು.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ 12–03–2008ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮೂಲಕ ಸಂಬಂಧಿಸಿದ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಕ್ರಮ ವಹಿಸತಕ್ಕದ್ದು. ಕಾರ್ಖಾನೆಗಳು ರೈತರಿಗೆ ಕಬ್ಬು ಖರೀದಿ ಬಾಕಿ ಉಳಿಸಿಕೊಂಡಿದ್ದಲ್ಲಿ, ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು, ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1760/ವೆಚ್ಚ–1/2009, ದಿನಾಂಕ:18–11–2009 ಮತ್ತು 02.12.2009ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2798

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## COMMERCE AND INDUSTRIES SECRETARIAT

**Sub :** M/s Ruchi Soya Industries Ltd., Mangalore – Eligibility for sales tax exemption under Agro & Food Processing Policy – Reg.

**Read**: 1 Govt. Order No. CI 20 SPI 99 dt:13.4.1999 announcing Agro Food Processing Industrial Policy 1999 & package of incentives & concessions.

2. Govt. Order No. CI 21 SPI 2001 dt:11.2.2004 wherein sales tax incentives was sanctioned to M/s Ruchi Soya Inds. Ltd. under Agro Food Processing Industrial Policy 1999.
3. Govt. Order No. CI 20 SPI 99 dt:3.3.2001 withdrawal of Agro Food Processing Industrial Policy 1999 w.e.f.13.4.1999.
4. Govt. letter No. CI 51 SPI 2005 dt:6.3.2008 wherein the sales tax incentives granted to M/s Ruchi Soya Inds. Ltd. in terms of Agro Food Processing Industrial Policy 1999 was withdrawn & the industry granted incentives under general Industrial Policy 1996-2001.
5. Hon'ble High Court Order on Writ Petition No.6266 of 2008 (T-RES) dt:7.1.2009.
6. U.O.Note No. Law/1727/LW/T/2009 dt:10.9.2009 of Section Officer (Opinion), Law, Justice & Human Rights Ltd.
7. Proceedings of 92nd, 94th & 97th SLCC meetings held on 3.3.2009, 19.5.2009 & 25.11.2009.
8. Opinion No.Law/1727/LW/T/2009 dt:8.9.2009 of Addl. Secretary (Opinion) Law, Justice & Human Rights Dept.

**Preamble:**

The project proposal of M/s Ruchi Soya Industries Ltd., Mangalore was approved in the 194th SLSWA meeting held on 22.02.2000. In accordance with the effective steps taken by the unit in implementation of their project, pipeline status was accorded to the unit and also 200% Sales Tax benefit was extended under Agro-Food Policy 1999. Accordingly, the company was enjoying the benefit of sales tax exemption of 200% of Fixed Assets from the date of commercial production i.e. 30.12.2001. In view of the withdrawal of the Agro-Food Processing Policy 1999 on 23.3.2001, the 200% sales tax exemption benefit extended to the unit was withdrawn from retrospective effect, and the unit was allowed to avail only 100% Sales Tax exemption benefit under the Industrial Policy 1996-2001.

2.0 Aggrieved by this, the company approached the Hon'ble High Court and filed a writ petition vide application No. 6266 of 2008. Hon'ble High Court passed the order on 7-1-2009 setting aside the 200% sales tax exemption withdrawal order No.ID/E2/C7/47/2007-08 dated 25.3.2008/ 2/4/2008 issued by the Directorate of Industries and Commerce and remitted the case to the reconstituted State Level Co-ordination Committee for administration and interpretation of New Industrial Policy packages to consider the matter afresh and to take appropriate decision.

3.0 Accordingly, this issue was deliberated in 92nd, 94th & 97th SLCC meetings held on 3.3.2009, 19.5.2009 & 25.11.2009 respectively.

In the 94th SLCC meeting held on 19.5.2009, the Committee felt that the issue be examined legally. Accordingly, the matter was referred to the Law Department.

4.0 The Law Department in their U.O. Note dt. 10.9.2009 has furnished the opinion as under:

(i) M/s RSIL fits into the definition of Agro Food Processing Industry notwithstanding the fact that it is not utilizing locally grown raw materials or utilizing imported raw materials. It fits into the definition of Agro Food Processing Industry by the reason of being an oil refining industry.

(ii) M/s RSIL is entitled to sales tax exemption / refund in terms of the latest eligibility certificate No.ID.E2 CI 47 2003-04 dt. 12.2.2004 issued in pursuance of G.O. No. CI 21. SPI. 2004 dt. 11.2.2004 in its status as the pipeline case of investment until full utilization to the extent of the ceiling fixed at Rs.155.56 crs or until expiration of the

